# ಮಧುರ ಮಿಲನ
## ಅಥವಾ
# ಭರತನ ಬಂಧು ಪ್ರೇಮ



## ೧. ಅಯೋಧ್ಯೆಯಲ್ಲಿ ಅವ್ಯವಸ್ಥೆ

"ವಶಿಷ್ಠ ಋಷಿಗಳೇ, ಇನ್ನು ನೀವೇ ನಮಗೆ ಮುಂದಿನ ದಾರಿಯನ್ನು ತೋರಬೇಕು. ನೀವು ಹೇಳಿದಂತೆ ಮಾಡಲು ಸಿದ್ಧರಿದ್ದೇವೆ" ಸುಮಂತ ಮಂತ್ರಿಯು ಸಣ್ಣ ಮೋರೆ ಮಾಡಿಕೊಂಡು ಮಾತನಾಡಿದ.

"ಎಲ್ಲರಿಗೂ ದೇವರೇ ದಾರಿಯನ್ನು ತೋರಬೇಕು. ಕೆಲಸಕ್ಕೆ ಬಾರದ ದಾಸಿಯೊಬ್ಬಳ ಮಾತಿನಿಂದ ಪ್ರಸಂಗವೆಲ್ಲ ಬುಡಮೇಲಾಗುವುದೆಂದು ನಾನು ಎಣಿಸಿರಲಿಲ್ಲ. ಪಟ್ಟಾಭಿಷೇಕದ ಪ್ರಸಂಗ! ಎಂತಹ ಆನಂದದ ಸಮಯ! ಆ ಅಮೃತದ ಕುಂಭದಲ್ಲಿ ಚಾಡಿಯ ಮಾತಿನ ಹುಳಿಯ ಹನಿಬಿದ್ದಿತು. ಹಾಲೆಲ್ಲ ಹಸಗೆಟ್ಟು ಹೋಯಿತು. ನಾಡೊಡೆಯನಾಗಬೇಕಾಗಿದ್ದ ರಾಮಚಂದ್ರ ಕಾಡಾಡಿಯಾಗಬೇಕಾಯಿತು. ಆತನ ಕೂಡ ಸೀತಾದೇವಿ ಹೋಗುತ್ತಿದ್ದಾಗ ನಮ್ಮ ರಾಜ್ಯ ಲಕ್ಷ್ಮಿಯೇ ಹೋಗುತ್ತಿದ್ದಾಳೇನೋ ಎನಿಸಿತು. ಎಂತೆಯೇ ಅರಮನೆಯೆಲ್ಲ ಭಣಗುಡುತ್ತಿದೆ, ರಣಗುಡುತ್ತಿದೆ-" ವಶಿಷ್ಠರು ನಿಟ್ಟುಸಿರು ಬಿಟ್ಟು ಸುಮ್ಮನಾದರು.

" ದಶರಥ ಮಹಾರಾಜನಾದರೂ ಬದುಕಿದ್ದರೆ ಏನಾದರೂ ಬೇರೆ ಹಾದಿಯನ್ನು ಹುಡುಕಬಹುದಾಗಿತ್ತು. ಶ್ರೀರಾಮಚಂದ್ರ ಕಾಡಿಗೆ ಹೋಗುತ್ತಲೇ 'ಹಾ ರಾಮಾ, ಹಾ ರಾಮಾ' ಎನ್ನುತ್ತ ಅವರು ಕುಳಿತಲ್ಲಿಯೇ ಪ್ರಾಣಬಿಟ್ಟರು ! ಎಂತಹ ಪುತ್ರ ಪ್ರೇಮವದು.... ! ಈ ಸುದ್ದಿಯನ್ನು ಶ್ರೀರಾಮಚಂದ್ರನಿಗೆ ತಿಳಿಸಿದರೆ ಹೇಗೆ ಮಂತ್ರಿಗಳೇ ? " ಮಾರ್ಕಂಡೇಯ ಮುನಿ ಹೊಸದೊಂದು ಆಶಂಕೆಯನ್ನು ಎತ್ತಿದರು.

" ಅದರಿಂದೇನೂ ಉಪಯೋಗವಾಗುವದಿಲ್ಲ ಮುನಿಗಳೇ. " ಸುಮಂತರು ಹಿಂದಾದುದನ್ನು ವಿವರಿಸತೊಡಗಿದರು. "ಶ್ರೀರಾಮಚಂದ್ರನ ಪಟ್ಟಾಭಿಷೇಕ ಸಮೀಪಿಸಿತು. ಆದರೂ ಕೈಕೇಯಿ ದೇವಿ ಬರಲಿಲ್ಲ. ಕರೆಯಲು ಸ್ವತ: ಮಹಾರಾಜರೇ ಹೋದರು.... "

"ಎಷ್ಟಾದರೂ ಪ್ರೀತಿಯ ಹೆಂಡತಿಯಲ್ಲವೇ ಅವರು ಮಹಾರಾಜರಿಗೆ ? " ವಶಿಷ್ಠರು ಕೊಂಕು ನುಡಿದರು.

" ಆ ಪ್ರೀತಿಯೇ ಮಹಾರಾಜರ ಪ್ರೇತ (ಹೆಣ)ಕ್ಕೆ ಕಾರಣವಾಯಿತು. ಮಹಾರಾಜರನ್ನು ಕಾಣುತ್ತಲೇ ಕೈಕೆಯಿ ಉರಿದುರಿದು ಬೀಳಹತ್ತಿದಳು. ಅವರು ಮಾತೆತ್ತುವ ಮೊದಲೇ ' ನೀವು ನನಗೆ ಕೊಡಮಾಡಿದ್ದ ಎರಡು ವರಗಳನ್ನು ಈಗಿಂದೀಗಲೇ ಕೊಡಬೇಕು ' ಎಂದು ಕೇಳಿಕೊಂಡಳು.... "

" ಎರಡು ವರಗಳೇ ? " ಮಾರ್ಕಂಡೇಯರು ಕೇಳಿದರು.

ಅಹುದು. ಹಿಂದೆ ದೇವಾಸುರ ಯುದ್ಧದಲ್ಲಿ ಕೈಕೇಯಿ ರಾಣಿ ಮಹಾರಾಜರಿಗೆ ಒಳ್ಳೇ ಸಹಾಯ ಮಾಡಿದ್ದಳಂತೆ. ಆಗ ಅವರು ಎರಡು ವರಗಳನ್ನು ಬೇಕಾದಾಗ ಬೇಡಲು ಮಾತು ಕೊಟ್ಟಿದ್ದರಂತೆ. ಅವುಗಳನ್ನು ಈಗ ಬೇಡಿದಳು. ಒಂದು ವರದಿಂದ-

ರಾಮ ಹದಿನಾಲ್ಕುವರುಷ ಕಾಡಿಗೆ ಹೋಗಬೇಕು. ಮತ್ತೊಂದು ವರದಿಂದ–ಭರತ ನಾಡಿಗೆ ಒಡೆಯನಾಗಬೇಕು…. ''



" ಆಗ ಮಹಾರಾಜರಿಗೆ ಸಿಡಿಲು ಎರಗಿದಂತೆ ಆಗಿರಬೇಕಲ್ಲವೇ ? ''

"ಅಬ್ಬಾ! ಒಮ್ಮೆಲೆ' ಎಲೇ ರಾಕ್ಷಸೀ, ರಾಮಚಂದ್ರ ನಿನಗೇನು ಮಾಡಿದ್ದನೆ? ನೀನೇಕೆ ಮನುಷ್ಯರೂಪದಲ್ಲಿ ಹುಟ್ಟಿದೆ?….' ಎಂದು ಇನ್ನೂ ಏನೇನೋ ಕೂಗಾಡುತ್ತಿದ್ದರು. ಅಷ್ಟರಲ್ಲಿ ರಾಮಚಂದ್ರನೇ ಬಂದ; ತಂದೆಯ ಸಂಕಟವನ್ನು ಕೇಳಿಕೊಂಡು ಸೂರ್ಯ ವಂಶದ ರಾಜರಮಾತು ಸುಳ್ಳಾಗಬಾರದೆಂದು ವನವಾಸಕ್ಕೆ ಹೋಗಲು ತಾನೇ ಒಪ್ಪಿಕೊಂಡ. ಎಂದಮೇಲೆ ಈಗ ಕರೆದರೆ ಹೇಗೆ ತಿರುಗಿ ಬಂದಾನು ? '' ಸುಮಂತ ತನ್ನ ಅಭಿಪ್ರಾಯವನ್ನು ತಿಳುಹಿದ.

"ದಶರಥ ರಾಜ ಸತ್ತ ಸುದ್ದಿಯನ್ನು ಹೇಳಿದರೆ?" ಮಾರ್ಕಂಡೇಯ ಮುನಿಗಳು ಮತ್ತೆ ಶಂಕೆಯನ್ನು ಎತ್ತಿದರು.

ರಾಮಚಂದ್ರ ಮುಂದಿಟ್ಟ ಹೆಜ್ಜೆಯನ್ನು ಹಿಂದೆ ಇಡುವವನಲ್ಲ. ತಂದೆ ಸತ್ತನೆಂದು ಕೇಳಿ ದುಃಖಮಾಡಬಹುದು ಅಷ್ಟೇ. ಆದರೆ ಭರತನನ್ನೇ ಬೇಗನೆ ಕರೆತಂದು ಪಟ್ಟಕ್ಕೆ ಕುಳ್ಳಿರಿಸಿರಿ" ಎಂದು ಸ್ಪಷ್ಟವಾಗಿ ಹೇಳುತ್ತಾನೆ. ಎಂದಮೇಲೆ ಈಗ ರಾಮಚಂದ್ರನ ವಿಚಾರವನ್ನು ಬಿಟ್ಟು ಭರತನನ್ನು ಕರೆಸಿಕೊಳ್ಳುವುದೇ ನೆಟ್ಟಗೆ" ವಶಿಷ್ಠರು ತಮ್ಮ ವಿಚಾರವನ್ನಿಟ್ಟರು.

ಈ ವಿಚಾರ ಎಲ್ಲರಿಗೂ ಒಪ್ಪಿಗೆಯಾಯಿತು. ಈ ವೇಳೆಯಲ್ಲಿ ಭರತ ಅಜ್ಜನ ಮನೆಯಲ್ಲಿ— ಕೇಕಯ ರಾಜ್ಯದಲ್ಲಿ ಇದ್ದ. ಆತನನ್ನು ಬೇಗನೆ ಕರೆಕಳಿಸುವ ಸಿದ್ಧತೆ ನಡೆಯಿತು. ಮಂತ್ರಿಗಳ ಅಪ್ಪಣೆಯಾಗುತ್ತಲೆ ಸೇವಕರು ರಥವನ್ನು ಸಿದ್ಧಪಡಿಸಿಕೊಂಡು ಬಂದರು. ಆಗ ಸುಮಂತ ಮಂತ್ರಿ ದೂತನಿಗೆ ಅಪ್ಪಣೆ ಮಾಡಿದರು— "ನೀವು ಈಗಿಂದೀಗಲೇ ಕೇಕಯ ರಾಜ್ಯಕ್ಕೆ ಹೋಗಬೇಕು, ಭರತರಾಜನನ್ನು ಕಾಣಬೇಕು. ರಾಜಕಾರಣದ ಆಲೋಚನೆಗಾಗಿ ವಶಿಷ್ಠ ಮುನಿಗಳು ನಿಮ್ಮನ್ನು ಬೇಗನೆ ಕರೆತರ ಹೇಳಿದ್ದಾರೆ. ಎಂದಿಷ್ಟೇ ಆತನಿಗೆ ಹೇಳಬೇಕು. ರಾಮಚಂದ್ರ ವನವಾಸಕ್ಕೆ ಹೋದುದನ್ನಾಗಲಿ ದಶರಥ ಮಹಾರಾಜರು ಮರಣಪಟ್ಟುದನ್ನಾಗಲಿ ಏನೂ ತಿಳಿಸಕೂಡದು. ಆತನೇ ಏನಾದರೂ ಕೇಳಿದರೆ, ಹಾಗೂ ಹೀಗೂ ಹಾರಿಕೆಯ ಉತ್ತರವನ್ನು ಕೊಡಬೇಕು. ಅಂತೂ ಅಲ್ಲಿ ಏನೂ ತಡಮಾಡದೆ ತಿರುಗಿ ಬರಬೇಕು............!"

ದೂತರು ತಡವಿಲ್ಲದೆ ರಥವನ್ನು ಮುನ್ನಡೆಸಿದರು. ಕಣ್ಣು ಮುಚ್ಚಿ ಕಣ್ಣು ತೆರೆಯುವುದರೊಳಗೆ ಅದು ಕಣ್ಮರೆಯಾಯಿತು.

ಆ ಮೇಲೆ ವಶಿಷ್ಠರೂ ಸುಮಂತ್ರನೂ ಮಾರ್ಕಂಡೇಯರೂ ಹೊರಗೆ ಬಂದರು. ಅರಮನೆಯನ್ನು ಅತ್ತಿತ್ತ ನೋಡಿದರು. ಎಲ್ಲೆಲ್ಲಿಯೂ ಏನೂ ಸದ್ದಿಲ್ಲ. ಎಲ್ಲ ಕಡೆಗೂ ಎರೆದು ಮಲಗಿಸಿ ದಂತಾಗಿತ್ತು. ಆ ಮೇಲೆ ಅರಮನೆಯಿಂದ ಹೊರಬಿದ್ದರು, ರಾಜ ಬೀದಿಯ ಮೇಲೆ ಬಂದರು. ಎಲ್ಲಿ ನೋಡಿದರೂ ಜನರ ಸುಳಿವೇ ಇಲ್ಲ. ರಾಜಮಾರ್ಗದ ಧೂಳಿಯನ್ನು ಕೂಡ ಉಡುಗಿರಲಿಲ್ಲ. ಆನಂದದ ಆಗರವೆನಿಸಿದ ಅಯೋಧ್ಯೆ ಇಂದು ಸ್ಮಶಾನಕ್ಕೆ ಸಮನಾಗಿ ತೋರುತ್ತಿತ್ತು. ಮುಗಿಲಲ್ಲಿ ನೆಗೆದಾಡುತ್ತಿದ್ದ ಧ್ವಜ ಪತಾಕೆಗಳು ಮುದುಡಿಯಾಗಿ ಭೂಮಿಗೆ ಬಾಗಿದ್ದುವು. ಮಂಗಲವಾದ್ಯಗಳು ಮೌನವಾಗಿದ್ದುವು. ನಾಗರಿಕರೆಲ್ಲ ಮನೆಬಾಗಿಲನ್ನು ಮುಚ್ಚಿ ಕೊಂಡು ಒಳಗೇ ಕುಳಿತಿದ್ದರು. ಉದ್ಯಮ—ವ್ಯವಹಾರಗಳ ಪೇಟೆ ಗಳಲ್ಲಿ ನೊಣಗಳ ಸುಳಿದಾಟ ಕೂಡ ಇರಲಿಲ್ಲ. ಎಲ್ಲ ಅಂಗಡಿಗಳೂ ಮುಚ್ಚಿದ್ದುವು. ಬೀದಿಯಲ್ಲಿ ಎಲ್ಲಾದರೊಬ್ಬರು ಕಂಡರೆ ಅವರ ಮುಖದ ಮೇಲೆಯೂ ಚಿಂತೆಯ ಚಿಹ್ನಗಳೇ. ಏಕೆಂದರೆ, ಈಗ ನಾಗ ರಿಕರು ಎರಡು ಬಗೆಯ ಚಿಂತೆಗೆ ಒಳಗಾಗಿದ್ದರು. ಏನಂದರೆ—

ತಮ್ಮನ್ನು ತಂದೆಯಂತೆ ಕಾಪಾಡುತ್ತಿದ್ದ ದಶರಥರಾಜ ಸತ್ತು ಹೋದ. ಆತನ ತರುವಾಯ ತಂದೆಗೆ ತಕ್ಕ ಮಗನಾದ ಶ್ರೀರಾಮನೇ ರಾಜನಾಗುವನೆಂದು ಅವರು ತಿಳಿದಿದ್ದರು. ಈಗ ಅವನೂ ಕಾಡಿಗೆ ಹೋಗಿಬಿಟ್ಟ. ಇನ್ನು ಕೈಕೇಯಿಯ ಕೈಯಲ್ಲಿ ಈ ರಾಜ್ಯದ ಆಡಳಿತ ಹೋಗತಕ್ಕದ್ದು. ಸವತಿಯ ಮಗನನ್ನು ಕಾಡಿಗೆ ಕಳಿಸಿ, ಗಂಡನ ಮರಣಕ್ಕೆ ಕಾರಣಳಾದ ರಕ್ಕಸಿಯವಳು! ಈಗ ಅವಳಿಗೆ ತನ್ನ ಕುಂಕುಮ ಮಣ್ಣುಗೂಡಿತಲ್ಲ ಎಂಬ ದುಃಖವೂ ಇಲ್ಲ. ತನ್ನ ಮನೋರಾಜ್ಯದಲ್ಲಿಯೇ ಆನಂದ ಪಡುತ್ತಿದ್ದಾಳೆ. ಇಂತಹಳ ಕೈಯಲ್ಲಿ ರಾಜದಂಡ ಸಿಕ್ಕರೆ ಮುಂದೆ ತಮ್ಮ ಗತಿ

ಏನೆಂದು ಪ್ರಜೆಗಳಿಗೆ ಹೆದರಿಕೆ. ಕೈಕೇಯಿರಾಣಿ ಯಾವ ಯಾವ ಹೊಸ ಹೊಸ ಅಪ್ಪಣೆಗಳನ್ನು ಹೊರಡಿಸುವಳೋ ಎಂದು ಭೀತಿ. ಅದಕ್ಕಾಗಿ, ಮನೆಬಿಟ್ಟು ಹೊರಬೀಳದೆ ಎಲ್ಲರೂ ಒಳಗೇ ಕುಳಿತಿದ್ದರು.

ವಶಿಷ್ಠರೂ ಸುಮಂತರೂ ಈ ಅಯೋಧ್ಯೆಯ ಅವ್ಯವಸ್ಥೆಯನ್ನು ನೋಡಿದರು; ಮರಮರ ಮರುಗಿದರು. ಬೆಲೆಯಿಲ್ಲದ ದಾಸಿಯೊಬ್ಬಳ ಚಾಡಿಯಿಂದ, ರಾಜ್ಯಕ್ಕೆ ರಾಜ್ಯವೇ ಕಣ್ಣೀರಿನ ಕಡಲಿನಲ್ಲಿ ಮುಳುಗಿತಲ್ಲ! ಎಂದು ನಿಟ್ಟುಸಿರು ಬಿಟ್ಟರು. ಆದರೆ ಉಪಯೋಗವೇನು? ಮಾಡುವುದೆಲ್ಲವೂ ಮುಗಿದು ಹೋಗಿತ್ತು; ಇನ್ನು ಆಗುವುದನ್ನು ಅನುಭವಿಸುವುದಷ್ಟೇ ಉಳಿದಿದ್ದಿತು. ಅವರೆಲ್ಲರೂ ಮತ್ತೆ ಅರಮನೆಯನ್ನು ಸೇರಿದರು, ಭರತನ ದಾರಿಯನ್ನು ಕಾಯಹತ್ತಿದರು.

---

## ೨. ಭರತನ ಬರುವಿಕೆ

ನಡುರಾತ್ರಿ ಸಮೀಪಿಸಿತ್ತು. ಕೇಕಯ ರಾಜನ ದರಬಾರದಲ್ಲಿ ಸಂಗೀತ-ನರ್ತನಗಳು ಒಳ್ಳೆ ಭರದಿಂದ ಸಾಗಿದ್ದುವು. ಮಿತ್ರ ಮಂಡಲದೊಡನೆ ಭರತರಾಜ ನಟ್ಟನಡುವೆ ಕುಳಿತಿದ್ದ. ಜೀವವಿಲ್ಲದ ಗೊಂಬೆಗಳಂತೆ ಪಿಳಿಪಿಳಿ ಕಣ್ಣು ಬಿಡುತ್ತಿದ್ದ ಇಷ್ಟೇ. ನಡೆದ ನೋಟಗಳಿಂದ ಅವನಿಗೇನೂ ಆನಂದವೆನಿಸುತ್ತಿರಲಿಲ್ಲ. ಆತನ ಮನಸ್ಸಿನಲ್ಲಿ ಏನೋ ಒಂದು ಹೊಯ್ದಾಟವೆದ್ದಿತ್ತು. ಕಾರಣವೇನೂ ತಿಳಿಯುತ್ತಿರಲಿಲ್ಲ. ನಿಟ್ಟುಸಿರುಗಳು ಮಾತ್ರ ತಾವಾಗಿಯೇ ಹೊರಬೀಳುತ್ತಿದ್ದುವು.

ನಿಜವಾಗಿ ನೋಡಿದರೆ ಭರತರಾಜನ ದುಃಖಕ್ಕೆ ಕಾರಣವೇನೂ ಇರಲಿಲ್ಲ. ಕೇಕಯರಾಜ ಮೊಮ್ಮಗನನ್ನು ಪ್ರಾಣಕ್ಕಿಂತಲೂ

ಪ್ರಿಯವಾಗಿ ನೋಡಿಕೊಳ್ಳುತ್ತಿದ್ದ. ಆತನ ಊಟ ಉಡಿಗೆ ವಿಹಾರ ಮುಂತಾಗಿ ಯಾವ ವೈಭವದಲ್ಲಿಯೂ ಕೊರತೆಯಾಗಿರಲಿಲ್ಲ. ಆದರೂ ಇಂದು ಭರತನಿಗೆ ಹುರುಪು–ಹುಮ್ಮಸಗಳಿರಲಿಲ್ಲ. ಎಲ್ಲೆಲ್ಲಿಂದಲೋ ಚಿಂತೆಯ ಕಾರ್ಮೋಡಗಳು ಬರುತ್ತಿವೆ; ಮನಸ್ಸಿನ ಮುಗಿಲನ್ನು ಮುಚ್ಚಿ ಬಿಡುತ್ತಿವೆ. ಕಾರಣವೇನು ?

ಭರತನ ಹೊಟ್ಟೆಯಲ್ಲಿ ಏನೋ ಒಂದು ಬಗೆಯ ಸಂಕಟ. ಅಲ್ಲದೆ, ಹಿಂದಿನ ರಾತ್ರಿ ಏನೇನೋ ಕೆಟ್ಟ ಕನಸುಗಳನ್ನು ಕಂಡಿದ್ದ. ಆದರಿಂದ ಅಯೋಧ್ಯೆಯಲ್ಲಿ ಏನೋ ಅವ್ಯವಸ್ಥೆಯಾಗಿರಬೇಕು, ರಾಜಪುರುಷರೊಬ್ಬರ ಜೀವಕ್ಕೇನೋ ಅಪಾಯವಾಗಿರಬೇಕು ' ಮುಂತಾಗಿ ಏನೇನೋ ತನ್ನಷ್ಟಕ್ಕೆ ತಾನೇ ಕಲ್ಪಿಸಿಕೊಳ್ಳುತ್ತಿದ್ದ; ನಿಟ್ಟುಸಿರನ್ನು ಬಿಡುತ್ತಿದ್ದ.

ಸಂಗೀತ, ನರ್ತನಗಳು ಒಳ್ಳೆ ಭರದಿಂದ ನಡೆದಿದ್ದುವು. ಜನರೆಲ್ಲರೂ ಆನಂದ ಪ್ರವಾಹದಲ್ಲಿ ತೇಲುತ್ತಿದ್ದರು. ಭರತನಿಗೆ ಮಾತ್ರ ಅದೆಲ್ಲ ಕಿವಿಯಲ್ಲಿ ಶೂಲವನ್ನು ಹಾಕಿದಂತೆ ಎನಿಸುತ್ತಿತ್ತು. ಅದಕ್ಕಾಗಿ ಅವನು ಎದ್ದು ದರಬಾರದ ಹೊರಬಾಗಿಲಿಗೆ ಬಂದ. ಅಷ್ಟರಲ್ಲಿಯೇ ಅಯೋಧ್ಯೆಯ ದೂತರೂ ಅಲ್ಲಿಗೆ ಬಂದರು; ಭರತರಾಜನಿಗೆ ನೆಲಮುಟ್ಟಿ ನಮಸ್ಕಾರ ಮಾಡಿದರು; ವಶಿಷ್ಠರು ಕೊಟ್ಟ ಪತ್ರದ ಚೀಲವನ್ನು ಆತನಿಗೆ ಕೊಟ್ಟು ಸುಮ್ಮನೆ ನಿಂತರು.

ಭರತನ ಎದೆ ಧಸ್ ಎಂದಿತು. ದೂತರನ್ನು ಒಮ್ಮೆ ಕಣ್ಣೆತ್ತಿ ನೋಡಿದ. ಅವರು ಎಲ್ಲೆಲ್ಲಿಯೂ ನಿಲ್ಲದಂತೆ ಧಾವಿಸಿ ಬಂದಂತೆ ತೋರುತ್ತಿತ್ತು. ಮೋರೆಗಳೆಲ್ಲ ಬಳಲಿ ಬೆಂಡಾಗಿದ್ದುವು. ಕಾರಣವನ್ನು ಕೇಳಬೇಕೆಂದರೆ ಭರತನಿಗೆ ಧೈರ್ಯ ಸಾಲಲೊಲ್ಲದು. ಪತ್ರದ ಚೀಲವನ್ನು ಬಿಚ್ಚಬೇಕೆಂದರೆ ಕೈಗಳು ನಡುಗಹತ್ತಿದುವು. ಅವನು ಹಾಗೆಯೇ ನಡುಗುವ ದನಿಯಲ್ಲಿ ದೂತರನ್ನು ಕೇಳಿದ—

"ಅಯೋಧ್ಯೆಯಲ್ಲಿ ತಂದೆ, ತಾಯಂದಿರು, ಅಣ್ಣತಮ್ಮಂದಿರು, ಪ್ರಜೆಗಳು ಎಲ್ಲರೂ ಕುಶಲವೇ? ನೀವೇಕೆ ಇಷ್ಟು ಅವಸರದಿಂದ ಬಂದಿರಿ?"

"ಏನೋ ಅವಸರದ ರಾಜಕಾರಣವಿದೆಯಂತೆ. ವಶಿಷ್ಠ ಗುರುಗಳು ಅರಮನೆಯ ಲಾಯದಲ್ಲಿದ್ದ ನಮ್ಮನ್ನು ಇತ್ತಿಂದಿತ್ತಲೇ ಕಳಿಸಿದರು. ನಾವು ಅರಮನೆಯ ವರೆಗೆ ಹೋಗಲೇ ಇಲ್ಲ........" ದೂತರು ಹಾಗೂ ಹೀಗೂ ಹಾರಿಕೆಯ ಉತ್ತರವನ್ನು ಕೊಟ್ಟರು.

ಭರತ ವಶಿಷ್ಠರ ಪತ್ರವನ್ನು ನೋಡಿದ. ಅದರಲ್ಲಿಯೂ ವಿಶೇಷವೇನೂ ಒಕ್ಕಣಿಸಿರಲಿಲ್ಲ. ತೀವ್ರವಾಗಿ ಬರಬೇಕು, ಎಂದಿಷ್ಟೇ ಅಪ್ಪಣೆಯಾಗಿತ್ತು. ಆತನಿಗೆ ಮತ್ತಿಷ್ಟು ಇತಿಮಿತಿಯಾಯಿತು. ತನ್ನ ಮೊದಲಿನ ಸಂಶಯ ಮತ್ತಿಷ್ಟು ಬಲಗೊಳ್ಳ ಹತ್ತಿತು. ಆತನು ಈಗಿಂದೀಗಲೇ ಹೊರಡಬೇಕೆಂದು, ನಿಶ್ಚಯಿಸಿದ. ಅದಕ್ಕಾಗಿ ಆಳುಗಳಿಗೆ ವಿಶ್ರಾಂತಿಯನ್ನು ತೆಗೆದುಕೊಳ್ಳಲು ಹೇಳಿದ; ತಾನು ತಾತನ ಅಪ್ಪಣೆಯನ್ನು ಪಡೆಯಲು ಹೊರಟು ಹೋದ.

ಭರತನ ಗಡಬಿಡಿಯನ್ನು ಕಂಡು ಕೇಕಯರಾಜನಿಗೂ ಅಚ್ಚರಿಯಾಯಿತು. ಆದರೆ ಏನು ಹೇಳಿದರೂ ಭರತ ನಿಲ್ಲುವಂತಿರಲಿಲ್ಲ. ಅದರಿಂದ ಆತನು ಮೊಮ್ಮಗನಿಗೆ ಆಶೀರ್ವಾದ ಮಾಡಿ ಬಿಳ್ಕೊಟ್ಟ; ಮತ್ತು ದಶರಥ ಮಹಾರಾಜ ಮೊದಲಾದವರಿಗೆಲ್ಲ ತಮ್ಮ ಕುಶಲ ವಾರ್ತೆಯನ್ನು ತಿಳಿಸಬೇಕೆಂದೂ ಅಲ್ಲಿಯ ಕುಶಲ ವಾರ್ತೆಯನ್ನೂ ತನಗೆ ತಿಳಿಸಬೇಕೆಂದು ಹೇಳಿದ.

ಬೆಳಗಿನ ಶುಭ ಸಮಯದಲ್ಲಿ ಭರತ ರಥವನ್ನೇರಿದ. ಕುದುರೆಗಳು ನಾಗಾಲೋಟದಿಂದ ಓಡಹತ್ತಿದವು. ರಥದಲ್ಲಿ ಕುಳಿತಾಗ ಭರತ ದೂತರನ್ನು ಏನೇನನ್ನೋ ಕೇಳುತ್ತಿದ್ದ; ಅವರು ಅಹುದು

ಅಲ್ಲ ಎಂದಿಷ್ಟೇ ಉತ್ತರಗಳನ್ನು ಕೊಡುತ್ತಿದ್ದರು. ಕೆಲಕೆಲವು ಉತ್ತರಗಳಂತೂ ಅಸ್ಪಷ್ಟವಾಗಿಯೇ ಕೇಳುತ್ತಿದ್ದವು. ಇದರಿಂದ ಆತನಿಗೆ ಯಾವ ನಿರ್ಣಯವೂ ಆಗಲೊಲ್ಲದು. ಎಷ್ಟು ಬೇಗನೆ ಅಯೋಧ್ಯೆಯನ್ನು ಮುಟ್ಟಿದರೂ ಒಳಿತೇ ಎಂದು ಅವನಿಗೆನಿಸುತ್ತಿತ್ತು. ಅದರಿಂದ ಕುದುರೆಗಳ ನಾಗಾಲೋಟ ಕುಕ್ಕುಲೋಟಕ್ಕಿಂತ ಕಡಿಮೆಯಾಗಿ ತೋರುತ್ತಿತ್ತು ಆತನಿಗೆ. ಅವನ ಮನಸ್ಸಿನ ಓಟದ ಮುಂದೆ ಕುದುರೆಗಳ ಓಟ ಎತ್ತ ಗತಿ ಮುಟ್ಟೀತು?

ರಥ ಅಯೋಧ್ಯೆಯ ಸಮೀಪಕ್ಕೆ ಬಂದಿತು. ತನ್ನನ್ನು ಸ್ವಾಗತಿಸಲು ಊರ ಹೊರವಲಯದಲ್ಲಿ ಪ್ರಚಂಡ ಜನಸಮ್ಮರ್ದವಿರಬಹುದು, ಮಂಗಳವಾದ್ಯಗಳು ಮೊಳಗುತ್ತಿರಬಹುದು, ಎಂದು ತಿಳಿದುಕೊಂಡಿದ್ದ ಭರತ. ಆದರೆ ಆತನಿಗೆ ಅಲ್ಲಿ ಏನೂ ಕಾಣಲಿಲ್ಲ, ಏನೂ ಕೇಳಲಿಲ್ಲ. ಊರ ಸಮೀಪಕ್ಕೆ ಹೋಗುತ್ತಲೇ ನಾಯಿಗಳು ಬೊಗಳ ಹತ್ತಿದವು. ಭರತನ ಬರುವಿಕೆಗೆ ಇದೆಂತಹ ಅಶುಭದ ಸ್ವಾಗತ !

ಭರತ ಎದೆ ಬಡಿದುಕೊಳ್ಳಹತ್ತಿತು. ಊರ ಮುಂಗಡೆಯಲ್ಲಿಯೇ ಕಂಗೊಳಿಸುವ ಕೈದೋಟಗಳಿದ್ದವು. ಅವುಗಳಲ್ಲಿ ಯಾವಾಗಲೂ ಸಿಂಗಾರದ ನರನಾರಿಯರು ತಂಡತಂಡವಾಗಿ ತಿರುಗಾಡುತ್ತಿದ್ದರು. ಇಂದು ನೋಡಿದರೆ ಅದು ಜನಶೂನ್ಯವಾಗಿತ್ತು, ಹಾಳು ಸುರಿಯತ್ತಿತ್ತು. ರಾಜಬೀದಿಯಲ್ಲಿಯೂ ಜನರ ಓಡಾಟವಿರಲಿಲ್ಲ. ಅರಮನೆಯವರೆಗೆ ಹೋದರೂ ಎಲ್ಲಿ ನೋಡಿದಲ್ಲಿ ಸ್ಮಶಾನ ಶಾಂತಿ! ಭರತ ಹೌಹಾರಿದ. ಥಟ್ಟನೆ ರಥದಿಂದ ಜಿಗಿದ, ಅರಮನೆಯೊಳಕ್ಕೆ ಓಡಿದ.

---

## ೩. ಮಾತೆಯಲ್ಲ ಮಹಾಮಾರಿ !

ಭರತ ನೇರವಾಗಿ ತಂದೆಯ ಕೋಣೆಗೆ ಹೋದ. ಅಲ್ಲಿ ದಶರಥರಾಜ ಕಾಣಲಿಲ್ಲ. ಕೈಕೇಯಿಯೊಬ್ಬಳೇ ಕುಳಿತಿದ್ದಳು. ಭರತ ತಾಯಿಗೆ ನಮಸ್ಕಾರ ಮಾಡಿದ. ಆಕೆಯೂ ಮಗನನ್ನು ಎತ್ತಿ ಅಪ್ಪಿಕೊಂಡಳು.

"ಅವ್ವಾ, ದಶರಥ ಮಹಾರಾಜರೆಲ್ಲಿ? ಅಣ್ಣ ರಾಮಚಂದ್ರನೆಲ್ಲಿ? ಅರಮನೆಯಲ್ಲಿ ಇಷ್ಟು ಸುಮ್ಮನವೇಕೆ?...." ಭರತ ಗಡಬಿಡಿಯಿಂದ ತಾಯಿಯನ್ನು ಕೇಳಿದ.

ಭರತಾ, ಅಜ್ಜನ ಮನೆಯಲ್ಲಿ ಸುಖವಾಗಿದ್ದೆಯಾ? ಅಲ್ಲಿ ಎಲ್ಲರೂ ಒಳಿತಾಗಿದ್ದಾರೆಯೇ?" ಕೈಕೇಯಿ ಅಡ್ಡಮಾತನ್ನೆತ್ತಿದಳು.

"ಇದ್ದಾರೆ, ಇದ್ದಾರೆ ಎಲ್ಲರೂ ಒಳಿತಾಗಿದ್ದಾರೆ. ಮೊದಲು ಹೇಳು, ದಶರಥ ಮಹಾರಾಜರೂ ಶ್ರೀರಾಮಚಂದ್ರನೂ ಎಲ್ಲಿದ್ದಾರೆ?...."

ಭರತ ಮತ್ತೆ ಮೊದಲಿನ ಪಲ್ಲವಿಯನ್ನೇ ಎತ್ತಿದ.

"ಮಗೂ, ನಿನಗೆ ಪ್ರವಾಸದಲ್ಲಿ ತೊಂದರೆಯೇನೂ ಆಗಲಿಲ್ಲವಲ್ಲವೇ? ನೀನು ಬರುವಾಗ ನಿಮ್ಮ ತಾತನೇನಾದರೂ...."

"ಪ್ರವಾಸದಲ್ಲಿ ತೊಂದರೆಯೇನೂ ಆಗಲಿಲ್ಲ. ತಾತನೇನೂ ಹೇಳಿ ಕಳಿಸಲಿಲ್ಲ. ಇರಲಿ. ತಂದೆಯವರೂ ಅಣ್ಣನೂ ಎಲ್ಲಿದ್ದಾರೆ?"

ಭರತ ಆ ಪಲ್ಲವಿಯನ್ನು ಕಟ್ಟಿಯೇ ಬಿಟ್ಟ.

"ರಾಜದೂತರು ನಿನ್ನನ್ನು ಮನ್ನಣೆಯಿಂದ ಕಂಡರೇ? ನಿನ್ನೊಡನೆ ಒಳ್ಳೆಯ ಮಾತುಗಳನ್ನು ಆಡಿದರೇ? ಇಷ್ಟೇಕೆ ಗಡಬಿಡಿಯಿಂದ ನಿನ್ನನ್ನು ಕರೆದುಕೊಂಡು........?"

"ಅವ್ವಾ, ನಾನು ಕೇಳಿದ ಮಾತುಗಳಿಗೆ ಉತ್ತರವನ್ನೇಕೆ ಹೇಳುವುದಿಲ್ಲ? ಬರಿಯ ಅಡ್ಡ ಮಾತುಗಳನ್ನು ಎತ್ತುತ್ತಿರುವೆ! ಎಲ್ಲಿದ್ದಾರೆ ಅಪ್ಪನೂ ಅಣ್ಣನೂ?"

ಕೈಕೇಯಿಗೆ ಈಗ ಬೇರೆ ಉಪಾಯವೇ ಉಳಿಯಲಿಲ್ಲ. ಒಮ್ಮೆ ತನ್ನ ಅಮಂಗಲ ಬಾಯನ್ನು ತೆರೆದಳು— ನಿನ್ನ ತಂದೆ ಪರ ಲೋಕಕ್ಕೆ ಪ್ರಯಾಣ ಬೆಳೆಸಿದರು.........

"ಹಾ ತಾತಾ...." ಎಂದವನೇ ಭರತ ಧೊಪ್ಪನೆ ನೆಲಕ್ಕೆ ಬಿದ್ದು ಬಿಟ್ಟ. ತಂದೆಯ ಮರಣವಾರ್ತೆ ಅವನ ತಲೆಯ ಮೇಲೆ ಸಿಡಿಲೆರಗಿದಂತಾಯಿತು. ! ಈಗ ಭರತನ ಮೈಮೇಲೆ ಎಚ್ಚರವೇ ಇರಲಿಲ್ಲ.

ಮಗನಿಗೇನಾಯಿತೋ, ಎಂದು ಕೈಕೇಯಿ ಹೌಹಾರಿದಳು. ಕೂಡಲೆ ದಾಸದಾಸಿಯರಿಂದ ಪನ್ನೀರನ್ನು ತರಿಸಿದಳು; ಮಗನ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡಳು; ಹಣೆಗೆ ನೆತ್ತಿಗೆ ನೀರನ್ನು ತಟ್ಟಿದಳು. ದಾಸಿಯರು ಗಾಳಿಯನ್ನು ಹಾಕಹತ್ತಿದರು.

ತುಸು ಹೊತ್ತಿಗೆ ಭರತ ಕಣ್ದೆರೆದ; ಕೈಕೇಯಿಯನ್ನು ಕಂಡ. ದಶರಥ ಏಕೆ ಸತ್ತನೆಂಬುದು ಅವನಿಗಿನ್ನೂ ಗೊತ್ತಿಲ್ಲ. ಆಗ ಅಳುತ್ತಲೆ ತಾಯಿಯನ್ನು ಕೇಳಿದ— ಅವ್ವಾ, ನಾನು ತಂದೆಗೆ ಇಷ್ಟು ಮಟ್ಟಿಗೆ ಬೇಡವಾದನೇ ? ಆತನು ಅಸ್ವಸ್ಥನಾದ ಸುದ್ದಿಯನ್ನು ನನಗೇಕೆ ತಿಳಿಸಲಿಲ್ಲ ? ನನ್ನನ್ನೇಕೆ ಕರೆಸಿಕೊಳ್ಳಲಿಲ್ಲ ? ಅಣ್ಣನಾದ ರಾಮಚಂದ್ರನೂ ನನ್ನನ್ನು ಮರೆತನೇ ? ಅಣ್ಣಾ, ಅಣ್ಣಾ, ರಾಮಚಂದ್ರಾ, ನಿನ್ನನ್ನು ಹೆತ್ತ ತಂದೆಯೆಂದೇ ತಿಳಿದುಕೊಂಡಿದ್ದೆನಲ್ಲ ! ನೀನೂ ನಿನ್ನ ಮಗನನ್ನು ಮರೆತೆಯಾ ? ಹಾಗಾದರೆ ಅವ್ವಾ, ನಾನೇಕೆ ಇಲ್ಲಿರಬೇಕು ? ಎಲ್ಲರಿಗೂ ಬೇಡವಾಗಿ........ "

"ಹಾಗಲ್ಲ ಮಗೂ; ಇನ್ನು ಯಾರು ಇಲ್ಲಿರುವುದಾದರೂ ನಿನ್ನ ಆಶ್ರಯದಲ್ಲಿಯೇ ಇರಬೇಕು. ಇನ್ನು ಈ ದೇಶ-ಕೋಶಗಳಿಗೆಲ್ಲ ನೀನೇ ಒಡೆಯ ! "

" ಎಂತಹ ಅನ್ಯಾಯವನ್ನು ಹೇಳುತ್ತಿರುವೆ ತಾಯಿ ? ಶ್ರೀರಾಮಭದ್ರನಿರುವಾಗ ನಾನು ಈ ದೇಶ–ಕೋಶಗಳಿಗೆ ಒಡೆಯನೇ ? ಜನತೆಯಾದರೂ ಒಪ್ಪೀತೇ ? ದೇವರಾದರೂ ಮೆಚ್ಚುವನೇ ? ಇರಲಿ. ತಂದೆಯವರ ಮರಣಕ್ಕೆ ಕಾರಣವೇನಾಯಿತು. ಕೇಳು ಬೇಗ ಹೇಳು ! "

" ಏನು ಹೇಳಬೇಕು ? ತನ್ನ ಪಾಪದ ಫಲವಾಗಿ........ "

" ಅಮ್ಮಾ ಅಮ್ಮಾ, ಸೂರ್ಯವಂಶದ ರಾಜನಿಗೆ ಎಂತಹ ಕೆಟ್ಟ ಹೆಸರನ್ನು ಕೊಡುತ್ತಿರುವೆಯಲ್ಲ. ಆತನೇನು ಅಂತಹ ಪಾಪವನ್ನು ಮಾಡಿದ ?

" ಮಕ್ಕಳಲ್ಲಿ ಭೇದ-ಬುದ್ಧಿಯನ್ನು ತೋರಿಸುವುದು ಪಾಪವಲ್ಲದೆ ಮತ್ತೆ ? ಪ್ರೀತಿಯ ಪಟ್ಟರಾಣಿಯಾದ ಈ ಕೈಕೇಯಿಯ ಮಗನಾದ ನಿನಗೆ ಪಟ್ಟವನ್ನು ಕೊಡುವುದನ್ನು ಬಿಟ್ಟು, ಆ ಕೌಸಲ್ಯೆಯ ಮಗನಾದ ರಾಮನಿಗೆ ಪಟ್ಟಗಟ್ಟುವ ಸಿದ್ಧತೆಯನ್ನು ನಡೆಸಿದ ನಿನ್ನ ತಂದೆ........ "

" ಇದರಲ್ಲಿ ಪಾಪವೇತರದು ? ತಂದೆಯ ತರುವಾಯ ರಾಮಭದ್ರನೇ ಪಟ್ಟಕ್ಕೆ ಬಾಧ್ಯನಲ್ಲವೇ ? ಆತನೇ ಜ್ಯೇಷ್ಠಪುತ್ರ. ನೀನು ಪ್ರೀತಿಯ ರಾಣಿಯಾಗಿರಬಹುದು; ಆದರೆ ಪಟ್ಟರಾಣಿಯಾಗಲಾರೆ. ಕೌಸಲ್ಯಾ ಮಾತೆಯೇ ಪಟ್ಟರಾಣಿ; ಆಕೆಯ ಮಗನೇ ಪಟ್ಟಕ್ಕೆ ಬಾಧ್ಯ. ಇದರಲ್ಲಿ ಪಾಪವೇನೂ ಇಲ್ಲವಲ್ಲ ? "

" ಇದೂ ಹಾಗಿರಲಿ. ರಾಮನಿಗೆ ಪಟ್ಟಗಟ್ಟುವ ಬಗೆಗೆ ದಶರಥರಾಜ ತನ್ನ ಸಾಮಾನ್ಯ ಪ್ರಜೆಗಳನ್ನು ಕೂಡ ಕೇಳಿದರು. ಆದರೆ ನನ್ನನ್ನು ಒಂದು ಅಕ್ಷರ ಕೂಡ ವಿಚಾರಿಸಬಾರದೇ ? ಅಷ್ಟು ಕಾಲುಕಸವಾದೆವಲ್ಲವೇ ನಾವು ಆತನಿಗೆ ? "

" ಎಂತಹ ತಪ್ಪು ತಿಳುವಳಿಕೆ ತಾಯಿ ! ರಾಮಭದ್ರ ಅರಸಾಗುವುದು ಪ್ರಜೆಗಳ ಮೇಲೆ. ಎಂದಮೇಲೆ ಆತನ ಬಗೆಗೆ ಪ್ರಜೆಗಳ ಅಭಿಪ್ರಾಯವನ್ನು ಅತ್ಯವಶ್ಯವಾಗಿ ಕೇಳಬೇಕು. ಪ್ರಜೆಗಳು ಬೇಡವೆಂದಿದ್ದರೆ ರಾಮನ ಪಟ್ಟಾಭಿಷೇಕ ಸಮಾರಂಭವನ್ನು ಎಂದೂ ಏರ್ಪಡಿಸುತ್ತಿರಲಿಲ್ಲ. ಇದರಲ್ಲಿ ತಂದೆಯವರ ಪಾಪವೇನೂ ಇಲ್ಲ "

" ಅವರು ನನಗೆ ಎರೆಡು ವರಗಳನ್ನು ಕೊಟ್ಟಿದ್ದರು. ಈ ವರೆಗೂ ಆ ಸುದ್ದಿಯನ್ನೇ ಎತ್ತಿರಲಿಲ್ಲ ನಿನ್ನ ತಂದೆ...."

" ವರಗಳನ್ನು ಕೇಳಬೇಕಾದವಳು ನೀನು. ಅವರೇಕೆ ಆ ಬಗೆಗೆ ವಿಚಾರ ಮಾಡಬೇಕು ? ಇದರಲ್ಲಿ ತಂದೆಯವರ ತಪ್ಪಿಲ್ಲವಲ್ಲ!"

" ಈಗ ನಾನು ಆ ವರಗಳನ್ನು ಬೇಡಿದೆ. ಅವುಗಳನ್ನು ಪೂರೆಯಿಸುವುದಕ್ಕೆ ಎಷ್ಟು ಒದರಾಡಬೇಕು ? ಎಷ್ಟು ಬಯ್ಯಬೇಕು ನನ್ನನ್ನು ? "

"ನಿನ್ನ ಬೇಡಿಕೆಯೇ ಯೋಗ್ಯವಾಗಿರಲಿಕ್ಕಿಲ್ಲ. ನಿನ್ನಮಾತುಗಳು ಅವರ ತಾಳ್ಮೆಯ ತೂಕವನ್ನು ತಪ್ಪಿಸಿರಬಹುದು.... ! ಇರಲಿ. ಏನೆಂದು ವರಗಳನ್ನು ಬೇಡಿದೆ ! "

"ಒಂದುವರದಿಂದ– ರಾಮಚಂದ್ರ ೧೪ ವರುಷ ಕಾಡಿಗೆ ಹೋಗಬೇಕು. ಮತ್ತೊಂದು ವರದಿಂದ– ಭರತನಿಗೆ ನಾಡೊಡೆತನ ಸಿಕ್ಕಬೇಕು. "

" ಛೂ ರಕ್ಕಸೀ, ಎಂದವನೇ ಭರತ ಪುಟಿದೆದ್ದು ನಿಂತ, ಕೈಕೇಯಿಯನ್ನು ತಿರಸ್ಕರಿಸಹತ್ತಿದ. "ನಿನಗೇನು ಅನ್ಯಾಯಮಾಡಿದ್ದನೇ ಆ ರಾಮಚಂದ್ರ ? ಕೌಸಲ್ಯಾ ತಾಯಿ ನಿನಗಾವ ಅಪರಾಧ ಮಾಡಿದ್ದಳು ? ಮಗನನ್ನು ಕಾಡಿಗೆ ಕಳಿಸಿ ತಾಯಿಯ ಕರುಳಿಗೆ ಕಾಯ್ದ ಕಬ್ಬಿಣದಿಂದ ಬರೆಕೊಟ್ಟೆಯಲ್ಲವೇ ? ತಿಳಿಯಿತು; ತಿಳಿಯಿತು. ರಾಮ ಕಾಡಿಗೆ ಹೋಗುತ್ತಲೇ ಪುತ್ರನ ಅಗಲಿಕೆಯನ್ನು ತಡೆಯಲಾ

ರದೆ ನನ್ನ ತಂದೆ ಪರಲೋಕಕ್ಕೆ ಹೋಗಿರಬೇಕು! ಹೀಗೆ, ನನ್ನ ಪಿತೃನನ್ನು ಪಿತೃಸಮಾನನಾದ ಅಣ್ಣನನ್ನು ಕೊಲೆಮಾಡಿದ ನೀನು ನನ್ನನ್ನು ಏಕೆ ಕೊಂದು ಹಾಕುವುದಿಲ್ಲ?.... ''

" ಮಗೂ ಮಗೂ.... ''

"ನನ್ನನ್ನೇಕೆ ಮಗುವೆಂದು ಕರೆಯುವೆ? ನೀನು ಮಾತೆಯಲ್ಲ, ಮಹಾ ಮಾರಿ! ನನ್ನ ಅಣ್ಣ ರಾಮಚಂದ್ರ ನಿನಗೆ ಮಗನಾಗಿರಲಿಲ್ಲವೇ? ಅಂತಹ ಸತ್ಪುತ್ರ ನಿನಗೆ ಯಾವ ಜನ್ಮದಲ್ಲಿ ಸಿಕ್ಕಾನು? ಪಟ್ಟಕ್ಕೆ ಬಾಧ್ಯಸ್ಥನಾದ ಅವನನ್ನು ಅಡವಿಗಟ್ಟಿ ದೇವ–ಧರ್ಮ–ಶಾಸ್ತ್ರ–ಕುಲ–ಮರ್ಯಾದೆಗಳನ್ನೆಲ್ಲ ಕಾಲಿನಿಂದ ಒದ್ದೆಯಲ್ಲವೇ? ನಿನ್ನ ಈ ದುಷ್ಕೃತ್ಯದಿಂದ ನಿನ್ನ ಕುಂಕುಮ ಅಳಿಸಿಹೋದರೂ ನಿನಗೆ ಅದರ ಅರಿವಿಲ್ಲವಲ್ಲ! ಮತ್ತೆ ಮತ್ತೆ ರಾಜ್ಯಲೋಭದ ಮಾತುಗಳನ್ನೇ ಆಡುವೆ! ನಿನ್ನ ಕ್ರೂರ ಪಶುವಿನ ಹಿಡಿತದಲ್ಲಿ ಪ್ರಜೆಗಳ ಗತಿ ಏನಾಗಬೇಕು? ಅಥವಾ, ಈ ನಿನ್ನ ಅನ್ಯಾಯದ ಆಳಿಕೆಯನ್ನು ಅವರು ನಡೆಯಗೊಟ್ಟಾರೆಂದು ತಿಳಿದಿರುವಿಯಾ! ಅವರೊಮ್ಮೆ ಕೆರಳಿ ಮಹಾ ಸಾಗರದ ತೆರೆಗಳಂತೆ ನಿನ್ನ ಅರಮನೆಯ ಮೇಲೇರಿ ಬಂದರೆ, ಕ್ಷಣಾರ್ಧದಲ್ಲಿ ನೀನೂ ನಿನ್ನ ಪರಿವಾರವೂ ಧೂಮ್ರ ಧೂಮ್ರವಾಗಿ ಹಾರಿ ಹೋದೀರಿ– ಅಣ್ಣಾ, ಅಣ್ಣಾ, ರಾಮಚಂದ್ರಾ ಯಾವ ಕಲ್ಲು–ಮುಳ್ಳುಗಳಲ್ಲಿ ಅಲೆಯುತ್ತಿರುವೆಯೋ– ನಿನ್ನನ್ನೆಲ್ಲಿ ಹುಡುಕಲಿ! ಬಂದೆ ಬಂದೆ ಅಣ್ಣಾ, ನಿನ್ನ ಬೆನ್ನ ಹಿಂದೆಯೇ ನಾನೂ ಬರುವೆ. ಕೈಕೇಯಿಽಽ ''

''ಹೆತ್ತತಾಯಿಗೆ ಹಾಗೆ ಬಿರುಸಾಡಬಾರದು ಮಗೂ ....'' ಸಂತಯಿಸುತ್ತ ಕೌಸಲ್ಯೆ ಬಂದು ಹೇಳಿದಳು. "ನೀನೇನು ತಿಳಿಯದವನಲ್ಲ. ತಾಯಿ–ತಂದೆಗಳ ಮಾತನ್ನು ಪಾಲಿಸುವದಕ್ಕಾಗಿಯೇ ರಾಮ ವನಕ್ಕೆ ಹೋದ. ನೀನೂ ಅದೇ ವಂಶದಲ್ಲಿ ಹುಟ್ಟಿದವನು, ರಾಮ

ಚಂದ್ರನ ತಮ್ಮ. ಎಂದಮೇಲೆ ನೀನೂ ಆತನಂತೆಯೇ ತಾಯ್ತಂದೆಗಳ ಮಾತನ್ನು ಕೇಳಬೇಕು. ಈಗ ನೀನೇ ಪಟ್ಟಕ್ಕೆ ಒಡೆಯ....!''

"ರಾಮಚಂದ್ರನಿರುವಾಗ ನಾನು ಪಟ್ಟಕ್ಕೆ ಒಡೆಯನೇ ತಾಯಿ! ಇಂತಹ ಮಾತುಗಳನ್ನಾಡಿ ನನ್ನನ್ನೇಕೆ ನಾಚಿಸುವಿರಿ? ಕೈಕೇಯಿಯ ಮಗನಾದ ನನಗೆ ಯಾರು ಏನು ಬೇಕಾದರೂ ಎನಬಹುದು. ಅಣ್ಣಾ ರಾಮಚಂದ್ರಾ, ಎಲ್ಲಿರುವೆ? ಅರಮನೆಯ ಅಂತರಂಗದಲ್ಲಿ ಹಂಸದುಪ್ಪಳದ ಮೇಲೆ ಹಾಯ್ದಾಡುತ್ತಿದ್ದ ನೀನು ಈಗ ಯಾವ ಅಡವಿಯ ಕಲ್ಲು ಮುಳ್ಳುಗಳಲ್ಲಿ ಮಲಗಿರುವೆ? ಪ್ರತಿದಿನವೂ ಪಂಚ ಪಕ್ವಾನ್ನಗಳನ್ನು ಉಣ್ಣುತ್ತಿದ್ದ ನೀನು ಯಾವ ಗೆಡ್ಡೆ-ಗೆಣಸುಗಳನ್ನು ತಿಂದು ಹಸಿವೆಯನ್ನು ಹಿಂಗಿಸಿಕೊಳ್ಳುತ್ತಿರುವೆ? ಸೀತಾ ಮಾತೆ, ಸೂರ್ಯನ ಮೋರೆಯನ್ನು ಕಂಡರಿಯದ ನೀನು ಈ ಬಿಸಿಲಿನ ಬೇಗೆಯನ್ನು ಹೇಗೆ ಸಹಿಸುವೆ ತಾಯೀ! ಮಹಾರಾಜನ ಮಡದಿಯಾಗಿ ಮೆರೆಯುವಳೆಂದು ತಿಳಿದು ಜನಕರಾಜ ನಿನ್ನನ್ನು ಶ್ರೀರಾಮನಿಗೆ ಕೊಟ್ಟನಲ್ಲವೇ? ಈಗ ನೀನು ಅಡವಿ ಅಡವಿ ತಿರುಗುತ್ತಿರುವೆಯೆಂದು ಕೇಳಿದರೆ, ಮುಪ್ಪಿನಲ್ಲಿ ಆತನ ಗತಿ ಏನಾದೀತು? ಲಕ್ಷ್ಮಣಾ ಲಕ್ಷ್ಮಣಾ, ನಿನ್ನ ಭಾಗ್ಯವೇ ಭಾಗ್ಯ. ಸದಾ ಸರ್ವದಾ ಶ್ರೀಹರಿಯ ಸನ್ನಿಧಿಯಲ್ಲಿರುವ ನಿನ್ನ ಪುಣ್ಯಕ್ಕೆ ಯಾವುದೂ ಎಣೆಯಿಲ್ಲ. ಅಯ್ಯೋ! ನನ್ನೊಬ್ಬನಿಗಾಗಿಯೇ ಇಷ್ಟೆಲ್ಲ ಅನರ್ಥವಾಯಿತಲ್ಲವೇ? ನಾನೇ ಹುಟ್ಟದಿದ್ದರೆ, ಕೈಕೇಯಿ ಯಾರಿಗಾಗಿ ರಾಜ್ಯವನ್ನು ಕೇಳುತ್ತಿದ್ದಳು? ಅಣ್ಣನೇಕೆ ಅಡವಿಗೆ ಹೋಗುತ್ತಿದ್ದ? ತಂದೆಯೇಕೆ ಪರಲೋಕಕ್ಕೆ ಹೋಗುತ್ತಿದ್ದರು? ಇನ್ನು ಈ ಪಾಪಿಯನ್ನು ಯಾರು ಕ್ಷಮಿಸುವರು! ಅಣ್ಣಾ, ಅಣ್ಣಾ ರಾಮಚಂದ್ರ...''

ಭರತ ಮೂರ್ಛೆಯಿಂದ ಬಿದ್ದುಬಿಟ್ಟ.

---

## ೪. ಶವ ಸಂಸ್ಕಾರ

ತಂಪಿನ ಉಪಚಾರಗಳಿಂದ ಭರತನಿಗೆ ತುಸು ಎಚ್ಚರಿಕೆ ಬಂದಿತು. ಆತನಿಗೆ ತನ್ನ ಮೈಮೇಲೆ ಯಾರೋ ಕೈಯಾಡುತ್ತಿದ್ದಂತೆ ಎನಿಸಿತು. ಮೆಲ್ಲನೆ ಕಣ್ ತೆರೆದು ನೋಡಿದ. ವಶಿಷ್ಠಋಷಿಗಳು ಕಂಡರು. ಕೂಡಲೆ ಅವನಿಗೆ ದುಃಖ ಮತ್ತೆ ನೂರ್ಮಡಿಸಿತು. "ಗುರುಗಳೇ, ನನ್ನ ತಂದೇಽ" ಎನ್ನುತ್ತ ಮತ್ತೆ ಅರಿವು ತಪ್ಪಿ ಬಿದ್ದ.

ವಶಿಷ್ಠರು ಮಮತೆಯಿಂದ ಮುಂಡಾಡುತ್ತ ಮುಂಡಾಡುತ್ತ ಅವನನ್ನು ಎಬ್ಬಿಸಿದರು. ಮತ್ತು—"ಮಗೂ, ನಿನ್ನಂತಹ ತಿಳಿವಳಿಕೆ ಯವನೂ ತಂದೆಯ ಮರಣಕ್ಕಾಗಿ ಇಷ್ಟು ಅಳಬೇಕೇ? ಮರಣ ವೇನೂ ಯಾರ ಕೈಯಲ್ಲಿಯ ಮಾತಲ್ಲ. ಅದರ ಕೈಯಲ್ಲಿ ಮಾತ್ರ ಎಲ್ಲರೂ ಹೋಗತಕ್ಕವರೇ. ಈಗ ಅತ್ತರೆ........"

"ಗುರುಗಳೇ, ನನ್ನ ತಂದೆ ಶೂರರಂತೆ ಸಮರ ಭೂಮಿಯಲ್ಲಿ ಸ್ವರ್ಗವನ್ನು ಪಡೆದಿದ್ದರೆ, ಅಥವಾ ಸಾಮಾನ್ಯರಂತೆ ಮಕ್ಕಳು ಮರಿ ಗಳೊಡನೆ ಮಾತನಾಡುತ್ತ ಮಾತನಾಡುತ್ತ ಪ್ರಾಣಬಿಟ್ಟಿದ್ದರೆ ನಾನೇನೂ ಅಳುತ್ತಿರಲಿಲ್ಲ. ನಾಲ್ವರು ಮಕ್ಕಳಲ್ಲಿ ಒಬ್ಬರೂ ಹತ್ತಿರ ವಿಲ್ಲದಿರುವಾಗ ಕುಟಿಲ ಕಾರಸ್ಥಾನಕ್ಕೊಳಗಾಗಿ ನನ್ನ ತಂದೆ ಪ್ರಾಣ ಬಿಟ್ಟರಲ್ಲ! ಅಪ್ಪಾ ಅಪ್ಪಾ, ನಾವೆಲ್ಲರೂ ಜೀವಂತವಾಗಿದ್ದೂ ನಿನ್ನ ಪಾಲಿಗೆ ಮಾತ್ರ........!"

"ಈಗ ಅತ್ತರೇನಾಗುವುದು ಭರತಾ! ರಾಮ–ಲಕ್ಷ್ಮಣ ರಂತೂ ವನವಾಸಿಗಳಾದರು. ಈಗ ನೀನೇ ತಂದೆಯ ದೇಹಕ್ಕೆ ಸಂಸ್ಕಾರ ಮಾಡಬೇಕು; ಉತ್ತರಕ್ರಿಯಾದಿಗಳನ್ನು ನೆರವೇರಿಸ ಬೇಕು........"

"ಗುರುಗಳೇ, ಗುರುಗಳೇ, ನನ್ನ ತಂದೆಯ ಮೋರೆಯನ್ನು ನಾನು ನೋಡಬಲ್ಲೆನೇ? ಅಷ್ಟು ಪುಣ್ಯವಿದೆಯೇ ನನಗೆ?

ಎಲ್ಲಿದ್ದಾನೆ ನನ್ನ ತಂದೆ..........'' ಎಂದು ಭರತ ಚಟ್ಟನೆ ಎದ್ದು ನಿಂತ. ವಶಿಷ್ಠರು ಮುಂದಾದರು. ಭರತ ಅವರನ್ನು ಹಿಂಬಾಲಿಸಿ ಹೊರಟ. ಎಣ್ಣೆಯ ಕೊಪ್ಪರಿಗೆಯೊಂದರಲ್ಲಿ ಕಾಯ್ದಿರಿಸಲಾಗಿತ್ತು ದಶರಥ ರಾಜನ ಕಳೇಬರವನ್ನು. ಅದನ್ನೆತ್ತಿ ಬಂಗಾರದ ಮಂಚದ ಮೇಲಿಟ್ಟರು. ಅದನ್ನು ನೋಡುತ್ತಲೇ 'ಅಯ್ಯೋ ತಾತಾ' ಎಂದು ಭರತ ಎದೆ ಬಡಿದುಕೊಂಡು ಅಳಹತ್ತಿದ. ಶತ್ರುಘ್ನನಂತೂ ನೆಲಕ್ಕೇ ಬಿದ್ದುಬಿಟ್ಟ. ವಶಿಷ್ಠರೂ ಮಾರ್ಕಂಡೇಯರೂ ಸುಮಂತ ಮಂತ್ರಿಗಳೂ ಅವರನ್ನು ಸಂತಯಿಸಿದರು.

ಭರತ ಬಂದುದು, ಕೈಕೇಯಿಯನ್ನು ಮನವಾರೆ ಬಯ್ದುದು ದಶರಥರಾಜನ ಪ್ರೇತವನ್ನು ಹೊರಗಿಟ್ಟುದುದೆಲ್ಲ ಪುರಜನರಿಗೆ ತಿಳಿಯಿತು. ನರನಾರಿಯರು ಮಹಾಸಾಗರದ ತೆರೆಗಳಂತೆ ಅರಮನೆಯತ್ತ ಓಡುತ್ತ ಓಡುತ್ತ ಬಂದರು. ಈಗ ಮಾತ್ರ ಪಟ್ಟಣವೆಲ್ಲ ಗೀಜಗನ ಗೂಡಾಗಿತ್ತು.

ಯೋಗ್ಯ ವೇಳೆಗೆ ಬೆಳ್ಳಿಯ ಪಲ್ಲಕ್ಕಿಯಲ್ಲಿ ಪ್ರೇತಯಾತ್ರೆ ಹೊರಟಿತು. ರಾಜ ಪರಿವಾರವೆಲ್ಲ ಬೆಳ್ಳಿ ಬಂಗಾರದ ಮುದ್ರಿಕೆಗಳನ್ನು ಸೂರೆಮಾಡುತ್ತ ಪಲ್ಲಕ್ಕಿಯ ಹಿಂದೆಯೇ ಹೊರಟಿತು. ನಾಗರಿಕರು ಅಲ್ಲಲ್ಲಿ ಹೂಮಾಲೆಯನ್ನು ಪ್ರೇತಕ್ಕೆ ಅರ್ಪಿಸುತ್ತಿದ್ದರು; ತಮ್ಮ ರಾಜಭಕ್ತಿಯನ್ನು ವ್ಯಕ್ತಮಾಡುತ್ತಿದ್ದರು.

ಅಗರು, ಚಂದನ, ಪದ್ಮಕ ಕಾಷ್ಠಗಳ ಚಿತೆಯ ಮೇಲೆ ಪ್ರೇತವನ್ನು ಇಳುಹಿದರು. ದಶದಿಕ್ಕುಗಳೂ ಬಿರಿಯುವಂತೆ ಭರತ ಅಳಹತ್ತಿದ. ವಶಿಷ್ಠ, ಮಾರ್ಕಂಡೇಯರು ಮಂತ್ರಗಳನ್ನು ಹೇಳಿದರು; ನಾಗರಿಕರು ರಾಜನ ಜಯಘೋಷ ಮಾಡಿದರು. ಅಗ್ನಿ ನಾರಾಯಣ ಮೆಲ್ಲಮೆಲ್ಲನೆ ಚಿತೆಯಲ್ಲಿ ಸುಳಿದಾಡಹತ್ತಿದ. ಕಡೆಗೆ ಒಮ್ಮೆಲೆ ಭುಗಿಲ್ಲೆಂದು ಉರಿ ಎದ್ದಿತು. ದಶರಥನ ದೇಹ ಪಂಚಮಹಾಭೂತಗಳಲ್ಲಿ

ಸೇರಿಹೋಯಿತು. ಭರತ ಅದನ್ನು ನೋಡುತ್ತ ಕಲ್ಲು ಗೊಂಬೆಯಂತೆ ಕುಳಿತು ಬಿಟ್ಟ. ವಶಿಷ್ಠರು ಏನೇನೋ ಸಮಾಧಾನ ಹೇಳಿ ಅವನನ್ನು ಅರಮನೆಗೆ ಕರೆತಂದರು.

---

## ೫. ಸಮಾಧಿ ಸಂದರ್ಶನ

ಈಗ ಭರತನನ್ನು ನೋಡಿದರೆ ಒಬ್ಬ ಸನ್ಯಾಸಿಯನ್ನು ನೋಡಿದಂತಾಗುತ್ತಿತ್ತು. ಮೈಮೇಲೆ ಕ್ಯಾವಿಯ ವಸ್ತ್ರಗಳು. ಊಟದ ಪರವೆಯಿಲ್ಲದೆ ಯಾವಾಗಲೂ ರಾಮಾ ರಾಮಾ ಎನ್ನುತ್ತ ಕುಳ್ಳಿರುವುದು. ವಶಿಷ್ಠರು ದಿನಾಲು ಬರುತ್ತಿದ್ದರು. ಅವನ ಕಡೆಯಿಂದ ಉತ್ತರಕ್ರಿಯಾದಿಗಳನ್ನು ಮಾಡಿಸುತ್ತಿದ್ದರು. ಅದೆಲ್ಲ ಮುಗಿಯುವ ವರೆಗೆ ನೀನು ಎಲ್ಲಿಯೂ ಹೋಗಕೂಡದೆಂದು ಅವರು ಭರತನಿಗೆ ಕಟ್ಟಪ್ಪಣೆಮಾಡಿದ್ದರು. ಇಲ್ಲವಾದರೆ ಅವನು ರಾಮನ ಹಾದಿಯನ್ನು ಯಾವಾಗಲೋ ಹಿಡಿದಿರುತ್ತಿದ್ದ. ಈಗ ಅರಮನೆಯಲ್ಲಿದ್ದರೂ ರಾಮ, ರಾಮ, ರಾಮ ! ಬೇರೆ ಶಬ್ದವೇ ಇಲ್ಲ ಆತನ ಬಾಯಲ್ಲಿ ! ಕನಸಿನಲ್ಲಿಯೂ ರಾಮ, ಮನಸಿನಲ್ಲಿಯೂ ರಾಮ !

ಕೈಕೇಯಿಯಂತೂ ಮಗನ ಹತ್ತಿರ ಹೋಗುವದಕ್ಕೆ ಹೆದರಿಬಿಟ್ಟಳು. ಈಗ ಆಕೆಗೆ ತನ್ನ ತಪ್ಪು ತಿಳಿಯಿತು; ಆ ಬಗೆಗೆ ಪೂರಾ ಪಶ್ಚಾತ್ತಾಪ ಪಟ್ಟಳು. ಇನ್ನು ಹೇಗಾದರೂ ರಾಮಚಂದ್ರನನ್ನು ಕರೆತರಲೇಬೇಕೆಂದು ಆಕೆ ನಿಶ್ಚಯಿಸಿದಳು. ಆದರೆ ಈ ವಿಚಾರವನ್ನು ಭರತನಿಗೂ ಮಂತ್ರಿ ಮುನಿಗಳಿಗೂ ತಿಳಿಸುವುದು ಹೇಗೆ? ಈ ವಿಚಾರದಲ್ಲಿಯೇ ಆಕೆಯ ದಿವಸಗಳು ಹೋಗಹತ್ತಿದವು.

ವಶಿಷ್ಠರು ಭರತನ ಕಡೆಯಿಂದ ನಿತ್ಯವೂ ಉತ್ತರಕ್ರಿಯಾದಿಗಳನ್ನುಮಾಡಿಸುತ್ತಿದ್ದರು. ಹನ್ನೆರಡನೆಯ ದಿನದ ಶ್ರಾದ್ಧವಾಯಿತು. ಅಂದು ಬ್ರಾಹ್ಮಣ ಸಂತರ್ಪಣೆಯಾಯಿತು; ಧನ, ಮುತ್ತು, ರತ್ನ,

ಗೋಗಳನ್ನು ಎಲ್ಲರಿಗೂ ಕೊಟ್ಟು ಮುಗಿಯಿತು. ಬಡಬಗ್ಗರಿಗೆ ಊರೂಟವಾಯಿತು. ಕೊನೆಯ ದಿನ ಸಮಾಧಿ ಸಂದರ್ಶನವಾಯಿತು. ಭರತ ಪಿತೃಪೂಜೆಯನ್ನು ಮುಗಿಸಿದ. ಮತ್ತೆ ಅವನಿಗೆ ದುಃಖ ಒತ್ತರಿಸಿ ಬಂದಿತು. ಗೊಳೋ ಎಂದು ಅಳುತ್ತ ಕುಳಿತ. ಅದನ್ನು ಕಂಡು ಋಷಿ ಮುನಿಗಳ, ನೆರೆದವರೆಲ್ಲರ ಕಣ್ಣುಗಳೂ ಒದ್ದೆಯಾದವು.

ಇನ್ನೆಷ್ಟು ಅತ್ತರೂ ಉಪಯೋಗವೇನು? ರಾಜ್ಯದ ವ್ಯವಸ್ಥೆಯನ್ನು ಮಾಡಲೇಬೇಕಲ್ಲವೇ? ಅದಕ್ಕಾಗಿ, ತಿರುಗಿ ಹೋಗೋಣವೆಂದು ವಶಿಷ್ಠರು ಭರತನನ್ನು ಎಚ್ಚರಿಸಿದರು.

"ಗುರುಗಳೇ, ತಂದೆಯಿಲ್ಲದ, ಅಣ್ಣನಿಲ್ಲದ ಆ ಸ್ಮಶಾನದಲ್ಲಿ - ಆ ಅರಮನೆಯಲ್ಲಿ ಇರಲು ನನ್ನ ಮನಸ್ಸಿಲ್ಲ. ನಾನು ಇಲ್ಲಿಯೇ ತಂದೆಯ ಸಮಾಧಿಯ ಪೂಜೆಯನ್ನು ಮಾಡುತ್ತಿರುವೆ, ಅಥವಾ ಇಲ್ಲಿಂದಲೇ ಶ್ರೀರಾಮಚಂದ್ರನನ್ನು ಹುಡುಕುತ್ತ ಹೊರಡುವೆ" ಎಂದು ಭರತ ಗಟ್ಟಿಮುಟ್ಟಾಗಿ ಹೇಳಿದ.

"ನಿನ್ನ ಇಚ್ಛೆಯಂತೆಯೇ ಮಾಡುವೆಯಂತೆ. ರಾಜ್ಯಕ್ಕೆ ಒಡೆಯರಿಲ್ಲದಿದ್ದರೆ ಹೇಗೆ? ಮನೆತನದ ಕೀರ್ತಿಯನ್ನು ಮುಳುಗಿಸಬಾರದಲ್ಲವೇ? ಎಲ್ಲರೂ ಕೂಡಿ ಆಡಳಿತದ ವ್ಯವಸ್ಥೆಯನ್ನು ಮಾಡೋಣ. ಮುಂದೆ ನಿನ್ನ ಇಚ್ಛೆಯಂತೆ ಮಾಡುವೆಯಂತೆ. ಈಗಂತೂ ಅರಮನೆಗೆ ಹೋಗೋಣ" ವಶಿಷ್ಠರು ಸಂತಯಿಸಿದರು.

"ಆಡಳಿತದ ಕಾರಣವೇ ಇಲ್ಲ. ಹೀಗೆಯೇ ಹೋಗಿ ರಾಮಭದ್ರನನ್ನು ಕರೆತರುವೆ. ಆತನನ್ನು ಪಟ್ಟಕ್ಕೆ ಕುಳ್ಳಿರಿಸುವೆ. ನಾನು ಆತನ ಆಳಿನ ಆಳಾಗಿ ದುಡಿಯುವೆ."

"ಅದೇನೇ ಇದ್ದರೂ ನಾಳೆಗೆ ಬೆಳಗಾಗಲಿ. ರಾಮಭದ್ರನನ್ನು ಕರೆಯುವುದಾದರೆ ಎಲ್ಲರೂ ಕೂಡಿಯೇ ಹೋಗೋಣವಂತೆ"

ವಶಿಷ್ಠರು ಹಾಗೂ ಹೀಗೂ ಭರತನನ್ನು ಸಂತಯಿಸಿದರು, ಅರಮನೆಗೆ ಅವನನ್ನು ಕರೆತಂದರು.

---

## ೬. ವೀರ ವಿರಕ್ತ

ಅಂದು ರಾತ್ರಿಯೆಲ್ಲ ಭರತನಿಗೆ ನಿದ್ದೆಯೇ ಇಲ್ಲ. ಯಾವಾಗ ಬೆಳಗಾದೀತೋ ಯಾವಾಗ ರಾಮಚಂದ್ರನ ಕಡೆಗೆ ಹೊರಡು ವೆನೋ ಎಂದು ಅವನ ಆತುರ. ಎಂದಮೇಲೆ ನಿದ್ದೆಯೆಲ್ಲಿ ಬರ ಬೇಕು. ಆದರೂ ಬೆಳಗಿನ ಜಾವಕ್ಕೆ ತುಸು ಇದ್ದೆ ಹತ್ತಿತು ಅವ ನಿಗೆ. ಆಗ ಕನಸಿನಲ್ಲಿ ರಾಮಚಂದ್ರನನ್ನೇ ಕಾಣುತ್ತಿದ್ದ ಅವನು. ಹಾಗೆಯೇ ಅರೆನಿದ್ದೆಯಲ್ಲಿ ಹಾಸಿಗೆಯ ಮೇಲೆ ಹೊರಳಾಡುತ್ತಿದ್ದ.

ಅಷ್ಟರಲ್ಲಿ ಮಂಗಲ ಸ್ತುತಿಪಾಠಕರು ಮಂಗಲಗೀತಗಳನ್ನು ಗಟ್ಟಿದನಿಯಲ್ಲಿ ಹಾಡಹತ್ತಿದರು. ಭರತನಿಗೆ ಅವೇನೂ ಹೊಸವಲ್ಲ. ಅರಸನನ್ನು ಎಬ್ಬಿಸುವುದಕ್ಕೆ ನಿತ್ಯವೂ ಹಾಡುತ್ತಿದ್ದ ಮಂಗಲಗೀತ ಗಳವು. ಆದರೆ ತಾನೇನೂ ಅರಸನಲ್ಲ. ಎಂದಮೇಲೆ ಈ ಮಂಗಲಗೀತಗಳೇಕೆ ತನ್ನಿದಿರಿಗೆ? ಅವನು ಗಡಬಿಡಿಸಿ ಎದ್ದು ಹೊರಗೆ ಬಂದ.

ಸ್ತುತಿಪಾಠಕರು ನೆಲಮುಟ್ಟಿ ನಮಸ್ಕಾರ ಮಾಡಿದರು. "ಪಟ್ಟಾಭಿಷೇಕ ಮಹೋತ್ಸವಕ್ಕಾಗಿ ರಾಜಸಭೆ ಕೂಡಿದೆ; ತಮ್ಮ ದಾರಿಯನ್ನು ಕಾಯುತ್ತಿದೆ. ನಾಗರಿಕರೂ ತಮಗೆ ಪಟ್ಟಗಟ್ಟಲು ಆತುರ ಪಡುತ್ತಿದ್ದಾರೆ" ಎಂದು ಹೇಳಿದರು.

"ಈ ನಾಡಿನ ಒಡೆಯ ಕಾಡಿನಲ್ಲಿ ಅಲೆಯುತ್ತಿದ್ದಾನೆ. ಆತ ನನ್ನು ಕರೆದುಕೊಂಡು ಬಂದು ಪಟ್ಟಗಟ್ಟಿರಿ. ನಾನು ಅರಸನಲ್ಲ. ನಡೆಯಿರಿಲ್ಲಿಂದ," ಭರತ ಅವರನ್ನು ಬೆದರಿಸಿ ಬಿಟ್ಟ.

ಆ ಮೇಲೆ ವಶಿಷ್ಠ ಮೊದಲಾದವರೂ ನಾಗರಿಕ ಪ್ರಮುಖರೂ ಭರತನಿದ್ದಲ್ಲಿಗೇ ಬಂದರು. ಅವರ ಸಂಗಡ ಕೈಕೇಯಿ ರಾಣಿಯೂ ಇದ್ದಳು. ಎಲ್ಲರೂ ತಮ ತಮಗೆ ತಿಳಿದಂತೆ ಭರತನ ಮನವೊಲಿಸಲು ಪ್ರಯತ್ನ ಪಟ್ಟರು. ಆದರೆ ಅವನು ಯಾರ ಮಾತಿಗೂ ಒಪ್ಪಲಿಲ್ಲ. "ಆಳುವ ದೊರೆ ಅಳಿದ ಮೇಲೆ ಹಿರಿಯ ಮಗನೇ ಪಟ್ಟವೇರುವುದು ದೇವ–ಧರ್ಮ,ಶಾಸ್ತ್ರ ಸಮ್ಮತ. ನಮ್ಮ ಕುಲ ಪರಂಪರೆಯೂ ಹೀಗೆಯೇ ಇದೆ. ದಶರಥರಾಜನ ತರುವಾಯ ಹಿರಿಯ ಮಗ ರಾಮಭದ್ರನೇ ಪಟ್ಟಕ್ಕೆ ಬಾಧ್ಯಸ್ಥ. ಆತನೇ ನನಗೂ ಈ ರಾಜ್ಯಕ್ಕೂ ನಿಮ್ಮೆಲ್ಲರಿಗೂ ಒಡೆಯ. ರಾಜ್ಯದ ದುರಾಶೆಯಿಂದ ನಾನು ಪಟ್ಟಕ್ಕೆ ಕುಳಿತರೆ ಕುಲಕಲಂಕನೆಂದು ಪ್ರಜೆಗಳೆಲ್ಲ ನನ್ನ ಮೋರೆಯ ಮೇಲೆ ಉಗುಳಿಯಾರು! ದೇವರ ಕೋಪದಿಂದ ಈ ಅಯೋಧ್ಯಾ ರಾಜ್ಯದ ಮೇಲೆ ಬೆಂಕಿಯ ಮಳೆ ಕರೆದೀತು. ಆದುದರಿಂದ ರಾಮಚಂದ್ರನನ್ನೇ ಕರೆತರೋಣ; ಆತನನ್ನೇ ಪಟ್ಟಕ್ಕೆ ಕುಳ್ಳಿರಿಸೋಣ." ಭರತ ಎಲ್ಲರಿಗೂ ಮೆಚ್ಚುಗೆಯಾಗುವಂತೆ ಮಾತನಾಡಿದ.

"ಆದರೆ ಪಿತೃವಾಕ್ಯ ಪರಿಪಾಲಕನಾದ ರಾಮಚಂದ್ರ ಈಗಿಂದೀಗಲೇ ತಿರುಗಿ ಬರಬಹುದೇ?" ವಶಿಷ್ಠರು ಶಂಕೆ ಎತ್ತಿದರು

"ಆತನು ಬಾರದಿದ್ದರೆ, ತಂದೆಯ ಮಾತಿನಂತೆ ನಾನು ಹದಿನಾಲ್ಕು ವರ್ಷ– ಅದೇಕೆ, ಜೀವವಿರುವವರೆಗೂ– ವನದಲ್ಲಿರುವೆ. ಶ್ರೀರಾಮಚಂದ್ರ ಇಂದೇ ದೊರೆಯಾಗಿ ಅಯೋಧ್ಯೆಯನ್ನು ಆಳಲಿ!"

ಭರತ ಈ ಮಾತನ್ನಾಡಿದಾಗ ಎಲ್ಲರೂ ಗೊಳೋ ಎಂದು ಅತ್ತುಬಿಟ್ಟರು! ಎಂತಹ ಮಹಾನುಭಾವನಿವನು! ನಡೆದು ಬರುತ್ತಿರುವ ಅಷ್ಟೈಶ್ವರ್ಯದ ಲಕ್ಷ್ಮಿಯನ್ನು ಕಣ್ಣೆತ್ತಿ ಕೂಡ ನೋಡುವುದಿಲ್ಲ! ಎಂತಹ ವೀರ ವಿರಕ್ತ

ಭರತನ ಇದಿರಿಗೆ ಇನ್ನು ಯಾರ ಮಾತೂ ನಡೆಯುವುದಿಲ್ಲ ವೆಂದು ಗೊತ್ತಾಯಿತು. ಇನ್ನು ಆತನಂತೆಯೇ ಹೋಗಬೇಕು; ಎಂದರೆಯೇ ರಾಜ್ಯಕ್ಕೆ ಒಂದಿಲ್ಲೊಂದು ಗತಿ ಸಿಕ್ಕುವುದು.

ಸರಿ. ಭರತನ ಹೇಳಿಕೆಯಂತೆ ಸಣ್ಣದೊಂದು ಸೈನ್ಯ ಊರ ಹೊರವಲಯದಲ್ಲಿ ಬೀಡು ಬಿಟ್ಟಿತು. ಅದರೊಡನೆ ಕುದುರೆಯ ಸವಾರರೂ ಆನೆಯ ಮಾವುತರೂ ಕೆಲವರು ಹೊರಟರು. ಸುಮಂತ, ವಶಿಷ್ಠ, ಮಾರ್ಕಂಡೇಯ. ಕೈಕೇಯಿದೇವಿ ಮೊದಲಾದವರೆಲ್ಲ ಬೇರೆ ಬೇರೆ ಮೇಣೆಗಳಲ್ಲಿ ಕುಳಿತರು. ಭರತರಾಜ ಸಂನ್ಯಾಸಿಗಳಂತೆ ವೇಷವನ್ನು ಹಾಕಿಕೊಂಡಿದ್ದ; ಎಲ್ಲಕ್ಕೂ ಮುಂಗಡೆಯ ಪಲ್ಲಕ್ಕಿಯಲ್ಲಿ ಕುಳಿತುಕೊಂಡಿದ್ದ. ಪಯಣ ಬೆಳೆಯಿತು.

ಪಯಣದ ಮೇಲೆ ಪಯಣ ಬೆಳೆಯಿತು. ಯಾರಿಗೂ ದಾರಿಯ ದಣಿವೇ ತೋರುವಂತಿಲ್ಲ. ಮೊದಲು ರಾಮಚಂದ್ರ ನನ್ನು ಕಾಣಬೇಕಾಗಿತ್ತು. ಬಹುದೂರ ಹೋದ ಮೇಲೆ ಪವಿತ್ರ ಗಂಗಾನದಿ ಬಂದಿತು. ಹಿಂದುಗಳಿಗೆ ಅದೊಂದು ಪವಿತ್ರ ತೀರ್ಥ-ಕ್ಷೇತ್ರ. ಭರತ ಅಲ್ಲಿಯೇ ಬೀಡು ಬಿಡಲು ಎಲ್ಲರಿಗೂ ಹೇಳಿದ. ತಡವಿಲ್ಲದೆ ಗೂಢಾಗಾರಗಳಾದುವು. ಗಂಗಾಸ್ನಾನ–ಸಂಧ್ಯಾದಿ ಗಳು ನಡೆದುವು. ಊಟವೂ ಮುಗಿಯಿತು. ಇನ್ನುಳಿದುದು ಒಂದೇ ಒಂದು ವಿಚಾರ: ಈ ನದಿಯನ್ನು ದಾಟುವುದು ಹೇಗೆ ? ತೆಪ್ಪಗಳ ವ್ಯವಸ್ಥೆಯನ್ನು ಯಾರು ಮಾಡುವವರು ?

ಅಷ್ಟರಲ್ಲಿ ಇಬ್ಬರು ಕುದುರೆ ಸವಾರರು ಅತ್ತ ಕಡೆಯೇ ಬರು ತ್ತಿರುವುದು ಕಂಡಿತು. ಆ ಗಂಗಾತೀರದ ಪ್ರದೇಶವೆಲ್ಲ 'ಗುಹ' ಎಂಬ ಬೆಸ್ತ ದೊರೆಯ ಆಳಿಕೆಗೆ ಒಳಪಟ್ಟಿತ್ತು. ಪ್ರವಾಸಿಕರನ್ನು ನದಿಯಲ್ಲಿ ದಾಟಿಸುವುದು, ಅವರಿಂದ ಅದರ ಪ್ರತಿಫಲವನ್ನು ಪಡೆ

ಯುವುದು ಇದೇ ಆ ರಾಜನ ಅಧಿಕವಾದ ಉತ್ಪನ್ನ. ಈ ಕೆಲಸದಲ್ಲಿ ಆತನ ಸಾವಿರಾರು ಪ್ರಜೆಗಳು ದುಡಿಯುತ್ತಿದ್ದರು.

ಶ್ರೀರಾಮಚಂದ್ರನೂ ಈ ಮೊದಲು ಈ ಗುಹನ ಸಾಹಾಯ್ಯದಿಂದಲೇ ಗಂಗಾನದಿಯನ್ನು ದಾಟಿದ್ದ. ಆಗ ಅವರ ಗೆಳೆತನ ಒಳಿತಾಗಿ ಕೂಡಿತ್ತು. – ಈಗ ಗುಹ ಈ ದೊಡ್ಡ ಸೈನ್ಯವನ್ನು ನೋಡಿದ, ಇವರೇನು ಶ್ರೀರಾಮಚಂದ್ರನ ಶತ್ರುಗಳೋ ಮಿತ್ರರೋ ಎಂಬುದನ್ನು ಅವನು ತಿಳಿದುಕೊಳ್ಳಬೇಕಾಗಿತ್ತು. ಹಾಗಾದರೆ, ಅವರನ್ನು ದಾಟಿಸುವುದಕ್ಕಾಗಲಿ ತಿರುಗಿ ಕಳಿಸುವುದಕ್ಕಾಗಲಿ ಅನುಕೂಲವಾಗುತ್ತಿತ್ತು. ಅದಕ್ಕಾಗಿಯೇ ಗುಹ ರಾಜ ತನ್ನ ನಂಬಿಗೆಯ ಸೇವಕರನ್ನು ಇತ್ತಕಡೆಗೆ ಕಳಿಸಿಕೊಟ್ಟಿದ್ದ.

ಆ ಸವಾರರು ನೇರವಾಗಿ ಸೈನ್ಯದ ಸಮ್ಮುಖದಲ್ಲಿಯೇ ಇಳಿದರು. ಮುಖ್ಯಸ್ಥರನ್ನು ಕೇಳುತ್ತ ಕೇಳುತ್ತ ಭರತ ರಾಜನಲ್ಲಿಗೆ ಬಂದರು; ಆತನಿಗೆ ತಮ್ಮ ರಾಜನ ಸಂದೇಶವನ್ನು ಹೇಳಿದರು. ಭರತರಾಜ ತಾನು ಶ್ರೀರಾಮನ ತಮ್ಮನೆಂದೂ ಅಣ್ಣನನ್ನು ಕಾಣಲು ಹೊರಟಿರುವೆನೆಂದೂ ಹೇಳಿದ.

ಸೇವಕರು ಆನಂದದಿಂದ ತಿರುಗಿದರು; ಗುಹನಿಗೆ ಆ ಸುದ್ದಿಯನ್ನು ಮುಟ್ಟಿಸಿದರು. ಕೂಡಲೆ ಆ ಅರಸು ಕಾಣಿಕೆ ಸಹಿತವಾಗಿ ಭರತರಾಜನನ್ನು ಕಂಡು, ಕಾಣಿಕೆಯನ್ನೊಪ್ಪಿಸಿ ಕೈಮುಗಿದ. ಇಬ್ಬರೂ ಒಬ್ಬರೊಬ್ಬರ ಕುಶಲ ಪ್ರಶ್ನಗಳನ್ನು ಕೇಳಿದರು. ಅಂದಿನ ರಾತ್ರಿ ಅಲ್ಲಿಯೇ ಇರಬೇಕು, ತನ್ನ ಆದರಾತಿಥ್ಯವನ್ನು ಸ್ವೀಕರಿಸಬೇಕು, ಎಂದು ಗುಹ ಕೇಳಿಕೊಂಡ.

ಭರತ ಅದನ್ನು ಒಪ್ಪಿಕೊಂಡ; ಮತ್ತು ಶ್ರೀರಾಮ ಎಲ್ಲಿರುವನೆಂದು ಗುಹನನ್ನು ಕೇಳಿದ. “ ಇಲ್ಲಿಂದ ಭಾರದ್ವಾಜ ಋಷಿಗಳ ಆಶ್ರಮಕ್ಕೆ ಹೋದ. ಬೆಳಗಿಗೆ ನಿಮ್ಮನ್ನು ನದಿಯನ್ನು ದಾಟಿಸುವೆ;

ಆಶ್ರಮದ ದಾರಿಯಲ್ಲಿ ಬಿಡುವೆ. ಅಲ್ಲಿಂದ ಮುಂದೆ ನಿಮಗೆ ಆತನ ವಾಸಸ್ಥಳ ಸಿಕ್ಕುವುದು ” ಎಂದು ಗುಹ ಹೇಳಿದ.

ಅಂದಿನಿರುಳು ಗುಹನ ಆತಿಥ್ಯದೊಳಗೆ ಅಲ್ಲಿಯೇ ಕಳೆಯಿತು. ಮರುದಿನ ಬೆಳಗಿಗೆ ಗುಹರಾಜ ತನ್ನ ಪರಿವಾರ ಸಹಿತ ಬಂದ; ಭರತ ರಾಜನ ಸೈನ್ಯ ಸಿಬ್ಬಂದಿಯನ್ನೆಲ್ಲ ಗಂಗಾನದಿಯಲ್ಲಿ ಪಾರು ಮಾಡಿದ. ಭರತರಾಜನ ಅಪ್ಪಣೆ ತಕ್ಕೊಂಡು ಮನೆಗೆ ಮರಳಿದ.

ಭರತನ ಸೇನೆಯೆಲ್ಲ ಮತ್ತೆ ಹೊರಟಿತು. ಬಹುದೂರ ಹೋದ ಮೇಲೆ ಭಾರದ್ವಾಜ ಮುನಿಗಳ ಆಶ್ರಮ ಕಂಡಿತು. ಭರತ ಪ್ರಯಾಗ ವನದಲ್ಲಿ ತನ್ನ ಸೇನೆಯನ್ನು ಬಿಟ್ಟ; ವಶಿಷ್ಠರೊಡನೆ ಮುನಿಗಳ ಹತ್ತಿರ ನಡೆಯುತ್ತ ಹೋದ.

ಮುನಿಗಳು ಅತ್ಯಾನಂದದಿಂದ ಇವರನ್ನು ಬರಮಾಡಿಕೊಂಡರು. ಅಂದಿನ ರಾತ್ರಿ ಅವರೆಲ್ಲರನ್ನು ತಮ್ಮ ಆತಿಥ್ಯದಲ್ಲಿಯೇ ಇಟ್ಟುಕೊಂಡರು. ಭರತನಿಂದ ಅಯೋಧ್ಯೆಯ ಆಗು–ಹೋಗುಗಳನ್ನೆಲ್ಲ ಕೇಳಿಕೊಂಡರು.

ಶ್ರೀರಾಮಚಂದ್ರ ಈ ಹೊತ್ತಿಗೆ ಚಿತ್ರಕೂಟ ಪರ್ವತದಲ್ಲಿದ್ದ. ಅದು ಭಾರದ್ವಾಜ ಮುನಿಗಳಿಗೆ ಗೊತ್ತಿತ್ತು. ಅವರು ಆ ಸಂಗತಿಯನ್ನು ಭರತ ವಶಿಷ್ಠರಿಗೆ ತಿಳಿಸಿದರು; ಮತ್ತು ಆ ಪರ್ವತ ಇಲ್ಲಿಂದ ಎರಡು ಸಾವಿರ ಯೋಜನಗಳ ಮೇಲಿದೆ. ಅದರ ಉತ್ತರಕ್ಕೆ ಯಮುನಾ ನದಿ ಹರಿಯುತ್ತಿದೆ; ದಕ್ಷಿಣಕ್ಕೆ ಮಂದಾಕಿನಿ ಪ್ರವಹಿಸುತ್ತಿದೆ. ನೀವು ಮಾತ್ರ ದಕ್ಷಿಣದ ದಾರಿಯಿಂದಲೇ ಹೋಗಬೇಕು. ಆ ದಿಕ್ಕಿಗೆ ಅಡವಿಗಳು ಬಹಳವಾಗಿಲ್ಲ. ಎಂದು ಮುಂತಾಗಿ ಅಪ್ಪಣೆ ಕೊಡಿಸಿದರು.

ಬೆಳಗಾಯಿತು. ಭರತ-ವಶಿಷ್ಠಾದಿಗಳು ಭಾರದ್ವಾಜರ ಅಪ್ಪಣೆ ಪಡೆದುಕೊಂಡು, ಚಿತ್ರಕೂಟದ ದಿಕ್ಕಿಗೆ ಪಯಣವನ್ನು ಬೆಳೆಸಿದರು.

## ೭. ಸಹೋದರ ಸಮ್ಮಿಲನ

ರಾಮ ಲಕ್ಷ್ಮಣ ಸೀತೆಯರಿಗೆ ಅಯೋಧ್ಯೆಯಲ್ಲಾದ ಅವ್ಯವಸ್ಥೆಯ ಅರಿವೇ ಇರಲಿಲ್ಲ. ಅವರು ಹಸಿರು ಹೊಲದಲ್ಲಿ ಹೊಕ್ಕ ಚಿಗರೆ ಹಿಂಡಿನಂತೆ, ಚಿಕ್ಕಂದದಿಂದ ಚಿನ್ನಾಟದಿಂದ ಕಾಲ ಕಳೆಯುತ್ತಿದ್ದರು. ಅವರು ಎತ್ತ ನೋಡಿದತ್ತ ಸೃಷ್ಟಿ ಸೌಂದರ್ಯದ ಭಾಂಡಾರ ತೆರೆದು ತೋರುತ್ತಿತ್ತು. ಒಮ್ಮೊಮ್ಮೆ ಗಿರಿಶಿಖರವನ್ನೇರಿ ದೂರ ದೂರ ಕಣ್ಣೋಟ ಹರಿಯುವ ವರೆಗೂ - ಸೃಷ್ಟಿಯ ಸೊಬಗನ್ನು ಸವಿಯುವರು. ಮುಗಿಲನ್ನು ಮುದ್ದಿಡುವ ಆ ವೃಕ್ಷಗಳು, ಅವುಗಳಲ್ಲರಳಿದ ಬಗೆಬಗೆಯ ಬಣ್ಣದ ಹೂಗಳು' ಎಂದಿಲ್ಲದ ಆನಂದವನ್ನು ತಂದೊಡ್ಡುತ್ತಿದ್ದವು. ಸಂಜೆ, ಮುಂಜಾವುಗಳಲ್ಲಿ ಸೂರ್ಯಾಸ್ತ-ಸೂರ್ಯೋದಯಗಳ ನೋಟವಂತೂ ಕಣ್ಮನಗಳಿಗೆ ಹಬ್ಬವನ್ನು ಮಾಡುತ್ತಿದ್ದವು. ನೆರೆಯಲ್ಲಿಯೇ ಹರಿಯುವ ಯಮುನಾ, ಮಂದಾಕಿನಿಗಳ ಕಲಕಲ ನಿನಾದ ಕಿವಿಗಳಲ್ಲಿ ಸವಿಜೇನನ್ನು ಸುರಿಯುತ್ತಿತ್ತು. ಆಗಾಗ ಗಿಡ ಬಳ್ಳಿಗಳಲ್ಲಿ ಮಂಜುಲಗಾನ ಮಾಡುವ ಹಕ್ಕಿಗಳ ಹಾರಾಟಕ್ಕಂತೂ ನೆಲೆಯೇ ಇಲ್ಲ. ಈಗ ರಾಮ-ಲಕ್ಷ್ಮಣರಿಗಿದ್ದ ಒಂದೇ ಒಂದು ಚಿಂತೆಯೆಂದರೆ ತಂದೆ ಮುದುಕನಾಗಿದ್ದಾನೆ. ಭರತನಿನ್ನೂ ಹುಡುಗ. ರಾಜ್ಯದ ಭಾರವನ್ನು ಅವರು ಹೇಗೆ ನಡೆಸುವರೋ? ಪ್ರಜೆಗಳಿಗೆ ಕಷ್ಟವಾಗುವದೋ ಏನೋ? – ಎಂದು. ಆದರೂ ವಶಿಷ್ಠ-ಸುಮಂತಾದಿಗಳಿರುವವರೆಗೂ ಅವ್ಯವಸ್ಥೆಯೇನೂ ಆಗಲಿಕ್ಕಿಲ್ಲವೆಂದು ಮತ್ತೊಮ್ಮೆ ಸಮಾಧಾನ ಹಚ್ಚಿಕೊಳ್ಳುವರು.

ಒಂದು ಮುಂಜಾವು ರಾಮ–ಲಕ್ಷ್ಮಣ–ಸೀತೆಯರು ಮಂದಾಕಿನಿಯ ಬೆಡಗನ್ನು ನೋಡುತ್ತ ನಿಂತಿದ್ದರು. ಇದ್ದಕ್ಕಿದ್ದ ಹಾಗೆಯೇ ಆ ಕಡೆಗೆ ಮುಗಿಲೆತ್ತರದ ವರೆಗೆ ಕೆಂಧೂಳು ಏಳಹತ್ತಿತು. ಇದೇನೆಂದು ಬೆರಗುಗೊಂಡು ನೋಡಹತ್ತಿದರು. ಧೂಳು ಇನ್ನೂ ದಟ್ಟ

ವಾಗುತ್ತಲೇ ಇತ್ತು. ತುಸು ತಡೆದಮೇಲೆ ಕುದುರೆಗಳ ಖುರಪುಟದ ಸಪ್ಪಳು, ಆನೆಗಳ ಬೃಂಹಣ, ಸೈನಿಕರ ಕೇಕೆಗಳು ಕೇಳತೊಡಗಿದವು. ಆ ಅರ್ಭಟೆಗೆ ವನ್ಯ ಪಶುಗಳು ಹೌಹಾರಿ ಗರ್ಜಿಸುತ್ತ ಸಿಕ್ಕತ್ತ ಓಡಲಾರಂಭಿಸಿದವು. ಇದೇನೆಂದು ಈ ಮೂವರೂ ಕಣ್ಣಲ್ಲಿ ಕಣ್ಣಿಟ್ಟು ನೋಡಿದರು.

ಲಕ್ಷ್ಮಣನ ಕಣ್ಣು ಬಲು ಚುರುಕು. ಅವನಿಗೆ ಇದು ಅಯೋಧ್ಯೆಯ ಸೈನ್ಯವೇ ಇರಬಹುದೇನೋ ಎನಿಸಿತು. ಮತ್ತಿಷ್ಟು ಲಕ್ಷಗೊಟ್ಟು ನೋಡಿದ. ಅಹುದು, ಅಹುದು; ರಥ–ಪಲ್ಲಕ್ಕಿಗಳ ಮೇಲೆ ತಮ್ಮವೇ ಧ್ವಜಗಳು ಹಾರಾಡುತ್ತಿವೆ. ನಿಜಕ್ಕೂ ಇದು ತಮ್ಮದೇ ಸೇನೆ. ಹಾಗಾದರೆ, ಇಲ್ಲೇಕೆ ಇಷ್ಟು ಆಡಂಬರ?

ಲಕ್ಷ್ಮಣನಿಗೆ ಸಂಶಯ ಬಂದಿತು. ರಾಜ್ಯಲೋಭಿಯಾದ ಕೈಕೇಯಿ ರಾಣಿಯ ಮಗನಾದ ಭರತ ರಾಜ್ಯಲೋಭದಿಂದ ರಾಮನನ್ನು ಬೆನ್ನಟ್ಟಿದ್ದಾನೆ. ನಿಜ, ನಿಜ! ಕೂಡಲೆ ಅವನು ಆಶ್ರಮದತ್ತ ನಡೆದ. ಬಿಲ್ಲು–ಬಾಣಗಳನ್ನು ಸಜ್ಜುಮಾಡಿಕೊಂಡು ಬಂದ.

ಅದನ್ನು ನೋಡಿ ರಾಮನಿಗೆ ನಗೆಬಂದಿತು. "ಲಕ್ಷಣಾ, ಇದೇನು ಹುಚ್ಚಾಟ?" ಎಂದು ಕೇಳಿದ.

"ಭರತ ರಾಜ್ಯಲೋಭದಿಂದ ನಮ್ಮ ಬೆನ್ನಟ್ಟಿ ಬರುತ್ತಿದ್ದಾನೆ. ಅಣ್ಣಾ, ನೀನೂ ಬಿಲ್ಲು-ಬಾಣಗಳಿಂದ ಸಜ್ಜಾಗು" ಎಂದ ಲಕ್ಷ್ಮಣ.

"ಅಯ್ಯೋ ಹುಚ್ಚಾ, ಇಷ್ಟು ದಿವಸವಾದರೂ ನೀನು ಭರತನನ್ನು ಸರಿಯಾಗಿ ತಿಳಿದುಕೊಳ್ಳಲಿಲ್ಲ. ಅವನೊಬ್ಬ ರಾಜಯೋಗಿ. ಅವನೆಂದೂ ಅನ್ಯಾಯಕ್ಕೆ ಮನಸ್ಸು ಮಾಡುವವನಲ್ಲ........"

"ಅವನು ನೀಚಳಾದ ಕೈಕೇಯಿಯ ಮಗನಲ್ಲವೇ?"

"ಕೈಕೇಯಿಯಾದರೂ ನಮಗಾವ ನೀಚತನವನ್ನು ಮಾಡಿದ್ದಾಳೆ? ನಾನು ಅರಸಾಗುವ ಬದಲು ಭರತ ರಾಜ್ಯವನ್ನಾಳಿದರೆ

ತಪ್ಪೇನಾಯಿತು ? ಅಣ್ಣ-ತಮ್ಮಂದಿರಲ್ಲಿ ಭೇದ ಬುದ್ಧಿಯನ್ನು ಹುಡುಕ ಬಾರದು. ಕೈಕೇಯಿ ಅನಾಯಾಸವಾಗಿ ನನಗೊದಗುತ್ತಿದ್ದ ಅರಸೊತ್ತಿಗೆಯ ಸಂಕಟವನ್ನು ತಪ್ಪಿಸಿದ್ದಾಳೆ, ನೆಮ್ಮದಿಯಿಂದ ಕಾಲ ಕಳೆಯುವ ಸನ್ನಿವೇಶಗಳನ್ನು ಒದಗಿಸಿದ್ದಾಳೆ. ಅರಸನ ತಲೆಗೆ ಬಂಗಾರದ ಕಿರೀಟ ಬಂದಿತೆಂದರೆ, ಆ ತಲೆಗೆ ಬೆಂಕಿ ಹತ್ತಿದಂತೆಯೇ ಸರಿ ಎಂದು ಗುರುಗಳು ಹೇಳುತ್ತಿರಲಿಲ್ಲವೇ ? ಆ ತೊಂದರೆಯನ್ನು ತಪ್ಪಿಸಿದುದಕ್ಕಾಗಿ ನಾವು ಕೈಕೇಯಿ ತಾಯಿಯನ್ನು ಅಭಿನಂದಿಸಬೇಕು. ಹೋಗು ಬಿಲ್ಲು ಬಾಣಗಳನ್ನು ತೆಗೆದಿಟ್ಟು ಬಾ ”

ಲಕ್ಷ್ಮಣ ಮಂದಮಂದವಾಗಿ ಹೆಜ್ಜೆಗಳನ್ನಿಡುತ್ತ ಆಶ್ರಮದ ಕಡೆಗೆ ನಡೆದ. ರಾಮಚಂದ್ರ ಅಲ್ಲಿಯೇ ನಿಂತಿದ್ದ. ನೋಡು ನೋಡುವಷ್ಟರಲ್ಲಿ ಜನಸಂದಣಿ ಸಮೀಪಿಸಿತು. ಭರತನೇ ಬರುತ್ತಿರುವನೆಂದು ರಾಮನಿಗೂ ನಂಬಿಗೆಯಾಯಿತು. ಆತನು ಮೆಲ್ಲನೆ ಆಶ್ರಮಕ್ಕೆ ಹಿಂತಿರುಗಿ ಮುಂಭಾಗದಲ್ಲಿ ಸೀತೆಯೊಡನೆ ಕುಳಿತ. ಲಕ್ಷ್ಮಣನೂ ನೆರೆಯಲ್ಲಿಯೇ ನಿಂತುಕೊಂಡ.

ಚಿತ್ರಕೂಟ ಸಮೀಪಿಸಿದಂತೆ ಸೈನ್ಯವೆಲ್ಲ ಲಗುಲಗು ಸಾಗಿ ಬರುತ್ತಿತ್ತು. ಒಂದು ರಥವಂತೂ ತಗ್ಗು ದಿಟ್ಟೆಗಳನ್ನು ನೋಡದೆ ನಾಗಾಲೋಟದಿಂದ ಓಡಿಸುತ್ತಿತ್ತು ಕುದುರೆಗಳನ್ನು. ಅದು ಭರತನದೇ ಇರಬೇಕೆಂದು ರಾಮಚಂದ್ರನ ನಂಬಿಗೆ. ಅವನು ಹಾಗೆಯೇ ನೋಡುತ್ತಿದ್ದ.

ಅಷ್ಟರಲ್ಲಿ ರಥ ತೀರ ಸಮೀಪಿಸಿತು. ಒಳಗಿನಿಂದ ತೇಜಸ್ವಿಯಾದ ತರುಣನೊಬ್ಬ ಹಾರಿಕೊಂಡ. ಅವನನ್ನು ನೋಡಿದರೆ ಭರತನಂತೆಯೇ ಕಾಣುತ್ತಿದ್ದ; ಆದರೆ ವೀರ ವಿರಕ್ತ ವೇಷದಲ್ಲಿದ್ದ.

ಅವನ ಆ ವೇಷವನ್ನು ಕಂಡು ರಾಮನಿಗೆ ಬಲು ಕೆಡಕೆನಿಸಿತು. “ ಲಕ್ಷ್ಮಣಾ, ಹೋಗು ಭರತನನ್ನು ಕರೆದುಕೊಂಡು ಬಾ ” ಎಂದು,

ಅಪ್ಪಣೆ ಮಾಡುತ್ತಿದ್ದ. ಅಷ್ಟರಲ್ಲಿ ಭರತ ಓಡುತ್ತ ಬಂದ, "ಅಣ್ಣಾ ಽಽ" ಎಂದು ರಾಮನ ಪಾದಗಳಿಗೆ ಬಿದ್ದು ಬಿಕ್ಕಿ ಬಿಕ್ಕಿ



ಅಳಹತ್ತಿದ. ಆಗ ರಾಮಚಂದ್ರ ತಮ್ಮನನ್ನು ಎತ್ತಿ ಅಪ್ಪಿಕೊಂಡ; ಕಣ್ಣೀರುಗಳಿಂದ ಆತನ ತಲೆಯ ಮೇಲೆ ಅಭಿಷೇಕ ಮಾಡಿದ. ತನ್ನ ತಪ್ಪು ತಿಳಿವಳಿಕೆಗಾಗಿ ಲಕ್ಷ್ಮಣ ಬೆಪ್ಪು ವಡೆದು ನಿಂತಿದ್ದ.

ಬಹಳ ಹೊತ್ತಿನವರೆಗೆ ಯಾರ ಬಾಯಿಂದಲೂ ಮಾತುಗಳು ಹೊರೆಡಲಿಲ್ಲ. ಅಷ್ಟರಲ್ಲಿ ಸೇನೆಯೂ ಸಮೀಪಕ್ಕೆ ಬಂದಿತು. ಸೇನಾವ್ಯವಸ್ಥೆಯನ್ನು ಮಾಡಲು ಲಕ್ಷ್ಮಣ ಹೊರಟು ಹೋದ. ಅಷ್ಟರಲ್ಲಿ ವಶಿಷ್ಠ, ಸುಮಂತಾದಿಗಳೂ ರಾಣೀ ಪರಿವಾರವೂ ಅಲ್ಲಿಗೆ ಬಂದಿತು. ರಾಮಚಂದ್ರ ಎಲ್ಲರಿಗೂ ನಮಸ್ಕಾರ ಮಾಡಿದ.— "ದಶರಥ ಮಹಾರಾಜರು ಬರಲಿಲ್ಲವೇ ?" ಎಂದು ಕೇಳಿದ.

ಒಮ್ಮೆಲೆ ಎಲ್ಲರ ಕಣ್ಣಲ್ಲಿಯೂ ನೀರುಕ್ಕಿದುವು. ಆಗ ಭರತ— "ಇನ್ನೆಲ್ಲಿಯ ಮಹಾರಾಜರು ಅಣ್ಣಾ ಽಽ! ನಿನ್ನ ಅಗಲಿಕೆಯನ್ನು ತಡೆಯಲಾರದೆ ಮಹಾರಾಜರು ಆ ಕೂಡಲೆ ಪ್ರಾಣಬಿಟ್ಟರು ಽಽ!" ಎಂದು ಗಟ್ಟಿಯಾಗಿ ಅಳಹತ್ತಿದ.

"ಹಾ, ತಾತಾ ಽಽ" ಎಂದು ರಾಮ ಕುಸಿದು ಕುಳಿತ. ವಶಿಷ್ಠರು ಮುಂದಾಗಿ ಆತನಿಗೆ ಸಮಾಧಾನವನ್ನು ಹೇಳಹತ್ತಿದರು. ಅಂದಿನ ದಿನವೆಲ್ಲ ಒಬ್ಬರನ್ನೊಬ್ಬರು ಸಮಾಧಾನಪಡಿಸುವುದರಲ್ಲಿಯೇ ಕಳೆದುಹೋಯಿತು.

---

## ೮. ಪಾದುಕಾ ಪ್ರಾಪ್ತಿ

ಮರುದಿನ ಬೆಳಗಿಗೆ ಆಶ್ರಮದ ಮುಂಭಾಗದಲ್ಲಿ ಎಲ್ಲರೂ ಒಟ್ಟಾದರು. ಮುಖ್ಯ ದರ್ಭಾಸನದ ಮೇಲೆ ವಶಿಷ್ಠರು ಕುಳಿತರು. ಕೆಳಗೆ ಹುಲಿದೊಗಲಿನ ಮೇಲೆ ರಾಮಚಂದ್ರ, ಆತನ ಬಳಿಯಲ್ಲಿಯೇ ಲಕ್ಷ್ಮಣ, ಭರತ, ಶತ್ರುಘ್ನರು, ತುಸು ಅಂತರದಲ್ಲಿ ರಾಣಿಯರ ಪರಿವಾರ ಮತ್ತೆ ಮಂತ್ರಿ ಮೊದಲಾದವರು ಎಲ್ಲರೂ ಕುಳಿತಿದ್ದರು. ಶ್ರೀರಾಮನನ್ನು ಅಯೋಧ್ಯೆಗೆ ಮರಳಿ ಕರೆದೊಯ್ಯುವುದೇ ಅಂದಿನ ಮುಖ್ಯ ವಿಷಯವಾಗಿತ್ತು.

"ರಾಮಚಂದ್ರ, ದಶರಥ ಮಹಾರಾಜರಂತೂ ಪರಲೋಕವಾಸಿಗಳಾದರು. ಈಗ ಸಿಂಹಾಸನ ತೆರವಾಗಿದೆ. ರಾಜನಿಲ್ಲದೆ ರಾಜ್ಯ ನಡೆಯುವುದಿಲ್ಲ; ಅದು ಪ್ರಜೆಗಳಿಗೆ ಒಳಿತೂ ಅಲ್ಲ. ದೊಡ್ಡ ಮಹಾರಾಜರ ತರುವಾಯ ಯಾರಿಗೆ ಪಟ್ಟಗಟ್ಟಬೇಕು, ಎಂದು ನಿನ್ನನ್ನು ಕೇಳುವುದಕ್ಕಾಗಿಯೇ ನಾವೆಲ್ಲ ಇಲ್ಲಿಗೆ ಬಂದಿರುವೆವು" ಎಂದು ವಶಿಷ್ಠರು ವಿಷಯವನ್ನು ಮುಂದು ಮಾಡಿದರು.

“ ಇಲ್ಲಿಗೆ ಬರುವ ಅವಶ್ಯಕತೆಯೇ ಇರಲಿಲ್ಲ. ಭರತನಿಗೆ ಪಟ್ಟವಾಗಬೇಕೆಂದು ಮಹಾರಾಜರ ಇಚ್ಛೆಯಿದ್ದಿತು. ಅದರಂತೆ ಭರತನಿಗೆ ಪಟ್ಟಗಟ್ಟಿದ್ದರೆ ತೀರಿಹೋಗುತ್ತಿತ್ತು ” ರಾಮಚಂದ್ರ ಸರಳವಾಗಿಯೇ ಉತ್ತರಕೊಟ್ಟ.

“ ರಾಮಭದ್ರಾ, ನಿನ್ನ ಪವಿತ್ರ ಮುಖದಿಂದ ಸುಳ್ಳುಮಾತು ಬರಲಾರವೆಂದು ಭಾವಿಸಿರುವೆ. ನಿಜವಾಗಿ ಹೇಳು. ನನಗೆ ಪಟ್ಟವಾಗಬೇಕೆಂದು ಮಹಾರಾಜರು ಬಯಸಿದ್ದರೋ, ಕೈಕೇಯಿ ರಾಣಿ ಬಯಸಿದ್ದಳೋ ? ” ಭರತ ನಡುವೆಯೇ ಕೇಳಿದ.

“ ಯಾರೇ ಬಯಸಿರಲಿ. ಅದಕ್ಕೆ ತಂದೆಯುವರು ಒಪ್ಪಿಗೆ ಕೊಟ್ಟರಲ್ಲವೇ ? ಎಂದಮೇಲೆ ಅದು ತಂದೆಯವರ ಬಯಕೆಯೇ ಆಯಿತು ! ”

“ ಅವರು ಒಪ್ಪಿಗೆ ಕೊಟ್ಟದ್ದರೆ ಮಗನು ಅಗಲಿದನೆಂದು ಮರಣಕ್ಕೆ ತುತ್ತಾಗುವ ಕಾರಣವಿರಲಿಲ್ಲ. ಭರತನ ಪಟ್ಟಾಭಿಷೇಕಕ್ಕೆ ಅವರ ಒಪ್ಪಿಗೆ ಇರಲಿಲ್ಲ. ಹಿರಿಯ ಮಗನಿರುವಾಗ ಕಿರಿಯನನ್ನು ಪಟ್ಟಕ್ಕೆ ಕುಳ್ಳಿರಿಸುವಷ್ಟು ದಡ್ಡರೂ ಅವರಿರಲಿಲ್ಲ. ಎಂದ ಮೇಲೆ ತಂದೆಯ ವಿಚಾರವೇ ಇಲ್ಲದಾಗ ಭರತನ ಪಟ್ಟಾಭಿಷೇಕದ ವಿಷಯವೇ ಮೊದಲು ನಿಲ್ಲುವುದಿಲ್ಲ ! ”

“ ಆದರೆ ಭರತಾ, ಕೈಕೇಯಿ ರಾಣಿಯೇ ಹಾಗೆ ಬಯಸಿದಳೆಂದು ತಿಳಿಯೋಣ. ಮಕ್ಕಳಿಗೆ ತಂದೆಯಂತೆ ತಾಯಿಯೂ ಪೂಜ್ಯಳೇ ಅಲ್ಲವೇ ? ಎಂದಮೇಲೆ ಭರತನಿಗೆ ಪಟ್ಟವಾಗಬೇಕೆಂದು ತಾಯಿ ಬಯಸಿದ್ದರೂ ಅದನ್ನು ನಡೆಸಿಕೊಡುವುದು ಮಕ್ಕಳಾದ ನಮ್ಮ ಕರ್ತವ್ಯವಲ್ಲವೇ ? ” ರಾಮಚಂದ್ರ ಮಾತಿನ ದಾರಿಯನ್ನು ಬದಲಿಸಿದ.

" ಅದು ತಿಳಿವಳಿಕೆಯಿಲ್ಲದ ಬೇಡಿಕೆ. ಹಿರಿಯ ಮಗನಿರುವಾಗ ಕಿರಿಯ ಮಗನನ್ನು ಪಟ್ಟಕ್ಕೆ ಕುಳ್ಳಿರಿಸಬೇಕೆನ್ನುವುದು ಬುದ್ಧಿವಂತಿಕೆಯ ಬೇಡಿಕೆಯಲ್ಲ. ಅದರಲ್ಲಿ ಹೆತ್ತಕರುಳಿನ ಹಂಬಲವಷ್ಟೇ ತೋರುತ್ತಿದೆ; ಹೊರತಾಗಿ ನ್ಯಾಯನೀತಿ ದೇವ-ಧರ್ಮಗಳ ಸಂಬಂಧವಿಲ್ಲ. "

" ಹಾಗಲ್ಲ ಭರತಾ, ತಾಯಿ–ತಂದೆಗಳೇ ನಮ್ಮ ದೇವರು; ಅವರ ಮಾತನ್ನು ನಡೆಸಿಕೊಡುವುದೇ ಮಕ್ಕಳ ಧರ್ಮ. ತಂದೆಯವರು ಆ ಮೊದಲೇ ವರಗಳನ್ನು ಕೊಟ್ಟು ಮಾತಿಗೆ ಸಿಕ್ಕು ಬಿದ್ದಿದ್ದರು. ಎಂದ ಮೇಲೆ ಕೈಕೇಯಿ ರಾಣಿಯ ಬೇಡಿಕೆಗೆ ಅವರು ಒಪ್ಪಿಗೆಯನ್ನು ಕೊಡದಿರುವುದು ಸಾಧ್ಯವೇ ಇರಲಿಲ್ಲ. ಹಾಗೆ ತಪ್ಪಿದ್ದರೆ, ನಮ್ಮ ಸೂರ್ಯ ಕುಲಕ್ಕೇ ಕಲಂಕ ಬರುತ್ತಿತ್ತು. ಅದರಿಂದ, ತಂದೆ–ತಾಯಿಗಳ ಮನಸ್ಸಿನ ಸಮಾಧಾನಕ್ಕಾಗಿ ನಾನೇ ಕಾಡಿಗೆ ಹೊರಟು ಬಂದೆ. ಆದರೆ ತಂದೆಯವರು ಪ್ರಾಣ ಬಿಡುವರೆಂಬ ಕಲ್ಪನೆ ಮಾತ್ರ ನನಗಿರಲಿಲ್ಲ. " ರಾಮಚಂದ್ರನ ಕಣ್ಣುಗಳಲ್ಲಿ ನೀರು ಹನಿಯಾಡಹತ್ತಿದುವು.

" ನಿನ್ನ ಅಗಲಿಕೆಗಾಗಿ ಯಾರು ಪ್ರಾಣ ಕೊಡಲಿಕ್ಕಿಲ್ಲ ರಾಮಚಂದ್ರ........ ? "

" ನನ್ನ ಹಂಬಲದಿಂದಲೇ ಇಷ್ಟು ಸೊರಗಿರುವೆಯೇನು ? ಅಯ್ಯೋ ಹುಚ್ಚಾ, ನಾನೆಲ್ಲಿ ಹೋಗುತ್ತಿದ್ದೆ ? ಹದಿನಾಲ್ಕು ವರುಷಗಳ ಮೇಲೆ ನಿನ್ನನ್ನು ಕಾಣುತ್ತಿರಲಿಲ್ಲವೇ ?"

" ರಾಮಭದ್ರಾ, ನೀನು ವನವಾಸಕ್ಕೆ ಹೋಗಿರುವೆಯೆಂದು ಕೇಳಿದಾಗಿನಿಂದ ಭರತಕುಮಾರ ಬಾಯಲ್ಲಿ ನೀರನ್ನು ಕೂಡ ಹಾಕಿಲ್ಲ. ನಿನ್ನನ್ನು ಕಂಡ ಮೇಲೆಯೇ ಉಪೋಷಣ ಬಿಡುವೆ

ನೆಂದು ಹಟ ಹಿಡಿದಿದ್ದ. ನಿನ್ನೆಯೇ ಆತನು ಇಲ್ಲಿ ತುತ್ತು ಅನ್ನ ವನ್ನು ಉಂಡುದು....” ವಶಿಷ್ಠರು ನಡುವೆಯೇ ಹೇಳಿದರು.

“ ಎಷ್ಟು ಕಠೋರ ತರವಿದು ಭರತಾ ! ಅಣ್ಣನ ಹುಚ್ಚು ಹಂಬಲದಲ್ಲಿ ರಾಜ್ಯವನ್ನೇ ಮರೆತಿರುವೆಯಲ್ಲ ! ಪ್ರಜೆಗಳ ಕಲ್ಯಾಣ ವನ್ನು ಕೈಬಿಡುವುದು ರಾಜನಾಗುವವನಿಗೆ ಯೋಗ್ಯವೇ ? ” ರಾಮ ಚಂದ್ರ ಗೆಲುವಿನ ದನಿಯಲ್ಲಿ ಮಾತಾಡಿದ.

“ ಯೋಗ್ಯವಾಗಿರಲಿಕ್ಕಿಲ್ಲ. ಆದರೆ ನಾನು ರಾಜನೇ ಆಗು ವುದಿಲ್ಲವಲ್ಲ. ಎಂದ ಮೇಲೆ ಆ ಯೋಗ್ಯಾಯೋಗ್ಯಗಳ ವಿಚಾರ ನನಗೇಕೆ ? ” ಭರತ ತಾತ್ತ್ವಿಕನಂತೆ ನುಡಿದ.

“ ರಾಜನೇ ಆಗುವುದಿಲ್ಲವೆಂದರೆ ?” ರಾಮ ಶಂಕಿಸಿದ.

“ ರಾಜನೇ ಆಗುವುದಿಲ್ಲವೆಂದರೆ— ದೊರೆಯಾಗುವುದಿಲ್ಲ, ಅರಸಾಳುವುದಿಲ್ಲ, ಸಿಂಹಾಸನವನ್ನೇರುವುದಿಲ್ಲ, ಪಟ್ಟಕ್ಕೆ ಕುಳ್ಳಿರುವು ದಿಲ್ಲ.........ಎಂದು ಅರ್ಥ ! ” ಭರತ ಗಂಭೀರವಾಗಿಯೇ ಮಾತಾ ಡಿದ; ಆದರೆ ಕುಳಿತವರ ಮೋರೆಯ ಮೇಲೆ ನಗೆಯು ಸೆಳಕು ಮಿಂಚಿ ಹೋಯಿತು.

“ ಎಷ್ಟು ಬುದ್ಧಿವಂತನಾಗಿರುವೆಯಪ್ಪಾ. ನೀನು ಅರಸಾಗು ವುದಿಲ್ಲವೆಂದರೆ ಮತ್ತೆ ಯಾರು ಆಗಬೇಕು ? ”

“ ದಶರಥರಾಜನ ಹಿರಿಯಮಗನೂ ದೇವಾಂಶ ಸಂಭೂತನೂ ಆದ ಶ್ರೀರಾಮಚಂದ್ರನೇ ಅರಸಾಗಬೇಕು. ”

“ ಆದರೆ ಅವನು ಕಾಡಿನಲ್ಲಿಲ್ಲವೇ ? ”

“ ಅವನನ್ನು ನಾಡಿಗೆ ಕರೆದೊಯ್ಯುವುದಕ್ಕಾಗಿಯೇ ಈ ಸೈನ್ಯ ವೆಲ್ಲ ಸಿದ್ಧವಾಗಿ ಬಂದಿದೆ. ”

“ ಭರತಾ, ಅಣ್ಣ–ತಮ್ಮಂದಿರಲ್ಲಿ ಭೇದ-ಭಾವ ಬೇಡ. ನೀನು ಅರಸನಾದರೇನು ? ನಾನು ಅರಸನಾದರೇನು? ನನಗೆ ಸಂತೋಷವೇ ಇದೆ. ”

" ಹಾಗಲ್ಲವೇ ಅಣ್ಣಾ ! ನೀನೂ ಅಣ್ಣ–ತಮ್ಮಂದಿರಲ್ಲಿ ಭೇದ ಭಾವವನ್ನೆಣಿಸಬೇಡ. ನೀನು ಕಾಡಿನಲ್ಲಿರುವ ಬದಲು ನಾನು ವನ ವಾಸಿಯಾಗುವೆ. ಇದರಿಂದ ನನಗೂ ಸಂತೋಷವೇ ಇದೆ. ನೀನು ಅರಸನಾಗು. ಸೂರ್ಯಕುಲದ ಕೀರ್ತಿಯನ್ನು ಪ್ರಜ್ವಲಿಸು. "

" ಭರತಾ ಭರತಾ....ಽಽ "

ರಾಮಚಂದ್ರನಿಗೆ ಮುಂದೆ ಮಾತುಗಳು ಕಟ್ಟಾದುವು. ಕುತ್ತಿಗೆ ಬಿಗಿದು ಬಂದಿತು. ಕಣ್ಣೀರು ಪಳಪಳ ಸುರಿಯಹತ್ತಿದುವು.

ಆಗ ಕೈಕೇಯಿ ದೇವಿ ಮುಂದುವರಿದು ಮಾತಾಡಹತ್ತಿದಳು.

" ರಾಮಚಂದ್ರಾ, ಹಿಂದಾದುದನ್ನೆಲ್ಲ ಮರೆತು ಬಿಡು. ಪಶ್ಚಾತ್ತಾಪದ ಅಗ್ನಿಯಲ್ಲಿ ಆ ದುಷ್ಟ ಕೈಕೇಯಿ ಸುಟ್ಟು ಸತ್ತು ಹೋಗಿದ್ದಾಳೆ. ಈಗ ಕೌಸಲ್ಯಾದೇವಿ ಬೇರೆಯಲ್ಲ, ನಾನು ಬೇರೆ ಯಲ್ಲ. ತಂದೆಯ ಮಾತು ನಡೆಯಲೇಬೇಕಾಗಿದ್ದರೆ ಭರತ ಕಾಡಿ ನಲ್ಲಿಯೇ ಇರಲಿ; ನೀನು ಮಾತ್ರ ಅಯೋಧ್ಯೆಗೆ ಬರಲೇಬೇಕು, ಪಟ್ಟಕ್ಕೆ ಕುಳ್ಳಿರಲೇಬೇಕು ! "

" ತಾಯಿಯ ಮಾತುಗಳನ್ನು ಮೀರಿದ ಪಾಪಕ್ಕೆ ನನ್ನನ್ನು ಗುರಿಮಾಡಬೇಡಮ್ಮಾ. ನನ್ನ ತಂದೆಯ ಮಾತಿನಂತೆ ನಡೆಯಲಿಲ್ಲ ವಾದರೆ ಆತನಿಗೆ ಸ್ವರ್ಗದ ಬದಲು ನರಕ ಪ್ರಾಪ್ತಿಯಾಗುವುದು. ಇಷ್ಟೇ ಅಲ್ಲ, ಕುಲ ಪರಂಪರೆ ತಪ್ಪಿದರೆ ಪಿತೃಪೂರ್ವಜರೂ ನರಕಕ್ಕೆ ಬಿದ್ದಾರು. ಅಂತಹ ಕುಲಾಂಗಾರನಾಗಲಾರೆ. " ರಾಮಚಂದ್ರ ವಿನಯದಿಂದ ಹೇಳಿದ.

" ಹಾಗಾದರೆ, ಕುಲಪರಂಪರೆಯನ್ನು ಮೀರಿ ನಾನು ಪಿತೃ ಪೂರ್ವಜರನ್ನು ನರಕಕ್ಕೆ ಕೆಡಹಲೇ ಅಣ್ಣಾ ? ಹಿರಿಯ ಮಗನಿರು ವಾಗ ಕಿರಿಯನು ಪಟ್ಟವೇರುವುದು ನರಕ ಸಾಧನವಲ್ಲವೇ ? ಅಂತಹ ಕುಲಾಂಗಾರನಾಗೆನ್ನುವಿಯಾ ನನ್ನನ್ನು ? " ಭರತ ಮತ್ತೆ ತೊಡಕು ಹಾಕಿದ.

ಈ ಮಾತಿನ ಚಕಮಕಿ ಹೀಗೆಯೇ ಸಾಗಿತು. ಯಾರೂ ಯಾರಿಗೂ ಸೋಲುವಂತಿಲ್ಲ. ಎಲ್ಲರೂ ದೇವ ಧರ್ಮ ಶಾಸ್ತ್ರಗಳನ್ನು ಹಿಡಿದು ಮಾತನಾಡುವವರೇ ? ಎಂದಮೇಲೆ ಸೋಲು ಬರಬೇಕು ಹೇಗೆ ? ಆಗ ವಶಿಷ್ಠರು ಗುರುತನದ ಅನುಭವಗಳನ್ನು ಹೇಳ ತೊಡಗಿದರು.

“ ರಾಮಚಂದ್ರಾ, ನಿಮ್ಮ ತಾತನ ಕಾಲದಿಂದಲೂ ನಾನು ನಿಮ್ಮ ಕುಲ ಪುರೋಹಿತನಾಗಿರುವೆ. ನಿಮ್ಮ ಕುಲ ಪರಂಪರೆಯು ಕೀರ್ತಿಯೆಲ್ಲ ನನಗೆ ಗೊತ್ತಿದೆ; ಅದು ಈ ವರೆಗೆ ಬೆಳ್ಳಿಯ ಬೆಳಕಿನಿಂದ ಬೆಳಗಿದಂತೆ ಮುಂದೆಯೂ ಪ್ರಜ್ವಲಿಸುತ್ತಿರಲೆಂದೇ ನನ್ನ ಹಾರೈಕೆ. ಈಗ ನಿಮ್ಮಿಬ್ಬರ ವಾದದಲ್ಲಿ ರಾಜ್ಯಕ್ಕೆ ಒಡೆಯರಿಲ್ಲದಾಗುವದು. ಆಮೇಲೆ ಹಿಂದಿನ ಹಿರಿಯರ ಕೀರ್ತಿಯೆಲ್ಲ ಮಸಳಿಸಿ ಹೋಗುವುದು. ಈಗ ಭರತನಂತೂ ಎಂದೂ ಪಟ್ಟವೇರುವದಿಲ್ಲವೆಂದು ಹೇಳುತ್ತಾನೆ. ಅದು ಆತನಿಗೆ ತಕ್ಕುದೇ ಸರಿ. ಈಗ ಆತನೇ ನಿನಗೆ ರಾಜ್ಯವನ್ನು ಒಪ್ಪಿಸುತ್ತಾನೆ. ಎಂದಮೇಲೆ ನೀನು ಅದನ್ನು ಸ್ವೀಕರಿಸುವದರಲ್ಲಿ ತಪ್ಪೇನೂ ಕಾಣುವದಿಲ್ಲ. ಮೇಲೆ ನಿನ್ನ ತಾಯಂದಿರೂ ನಿನ್ನನ್ನು ಕರೆಯುತ್ತಾರೆ ಎಂದಮೇಲೆ ಅವರ ಮಾತನ್ನೂ ನೀನು ಮೀರಬಾರದು. ನಡೆ. ಅಯೋಧ್ಯೆಯ ಅರಸಾಗು’—

“ ಗುರುಗಳೇ, ಮಾತನ್ನು ಮೀರಿದನೆಂದು ತಾವು ಕೋಪಿಸಿಕೊಳ್ಳಬಾರದು. ಭರತನ ಆಳಿಕೆಯಿಂದ ನಮ್ಮ ಕುಲದ ಕೀರ್ತಿ ನೂರ್ಮಡಿಯಾಗಿ ಬೆಳಗುವದೆಂದು ನನಗೆ ನಂಬುಗೆಯಿದೆ; ಹಾಗೆ ಬೆಳಗಲಿ ಎಂದು ಆತನಿಗೆ ನನ್ನ ಹಾರೈಕೆಯಿದೆ, ಹರಕೆಯಿದೆ. ಸುಮ್ಮನೆ ಈ ವಾದದಲ್ಲಿ ವ್ಯರ್ಥವಾಗಿ ವೇಳೆಯನ್ನು ಕಳೆಯುವುದು ಬೇಡ. ಭರತಾ, ನಾನೇ ನೀನೆಂದು ತಿಳಿ ಅದೇ ಭಾವನೆ

ಯಿಂದಲೇ ಸಿಂಹಾಸನವನ್ನು ಏರು. ಒಳಿತಾಗಿ ರಾಜ್ಯವನ್ನು ಆಳು. ಹದಿನಾಲ್ಕು ವರುಷಗಳು ಮುಗಿದ ದಿನವೇ ನಾನು ಅಯೋಧ್ಯೆಗೆ ಹೊರಡುವೆ. ಈಗ ನೀನು ಭರತನೆಂಬುವದನ್ನು ಮರೆ. ರಾಮನೆಂಬ ಭಾವನೆಯಿಂದ ಅಯೋಧ್ಯೆಗೆ ತಿರುಗು. ಇದಕ್ಕೆ ತಿರುಗಿ ಮಾತನಾಡಿದೆಯೆಂದರೆ ತಂದೆಯ ಆಣೆಯಿದೆ. ”

“ ಆಯಿತು ಅಣ್ಣಾ, ನಿನ್ನ ಮಾತಿನಂತೆ ನಡೆಯುವೆ. ಆದರೆ ನಾನೇ ರಾಮಚಂದ್ರನೆಂದು ತಿಳಿಯುವದೂ ತಪ್ಪಾದೀತು. ನೀನು ದೇವಾಂಶದಿಂದ ಹುಟ್ಟಿದವ. ನಾನೊಂದು ಸಾಮಾನ್ಯ ನರಹುಳು. ಆದುದರಿಂದ ಹೀಗೆ ಮಾಡು. ನಿನ್ನ ಮಂಗಲಮಯ ಪಾದುಕೆಗಳನ್ನು ನನಗೆ ಅನುಗ್ರಹಿಸು. ಅವು ‘ದೇವರ’ ಪಾದವೆಂದೇ ತಿಳಿಯುವೆ, ಅವುಗಳನ್ನು ಸಿಂಹಾಸನದ ಮೇಲಿಡುವೆ. ಅವುಗಳ ಅನುಗ್ರಹ ಬಲದಿಂದ ನನಗೆ ತಿಳಿದಂತೆ ರಾಜ್ಯಭಾರಮಾಡುವೆ. ಇದಕ್ಕಾದರೂ ಒಪ್ಪುವೆಯಾ ತಂದೆಯೇಽಽ.... ’’

ಭರತನ ಬೇಡಿಕೆಯನ್ನು ಕೇಳಿ ಎಲ್ಲರ ಕಂಠಗಳೂ ಬಿಗಿದು ಬಂದುವು. ಇಂತಹ ಮಹಾನುಭಾವ, ಇಂತಹ ಬಂಧುಪ್ರೇಮ ಜಗತ್ತಿನಲ್ಲಿ ಇನ್ನೆಲ್ಲಾದರೂ ಸಿಕ್ಕಬಹುದೇ ಎಂದು ಎಲ್ಲರಿಗೂ ಅಚ್ಚರಿಯೆನಿಸಿತು. ರಾಮಚಂದ್ರನಂತೂ ಭರತನನ್ನು ಬಿಗಿಯಾಗಿ ಅಪ್ಪಿಕೊಂಡ. “ಭರತಾ ನಿನ್ನ ಈ ಬಂಧುಪ್ರೇಮ” ಜಗತ್ತಿನಲ್ಲಿ ಸೂರ್ಯಚಂದ್ರರಿರುವವರೆಗೂ ಮಾದರಿಯಾಗಿ ಉಳಿಯಲಿ’’ ಎಂದು ಹರಸಿ ಮುಂಡಾಡಿದ. ಆತನಿಗೆ ತನ್ನ ಪಾದುಕೆಗಳನ್ನು ಕೊಟ್ಟ. ಭರತ ಅವನ್ನು ತಲೆಯಮೇಲಿಟ್ಟುಕೊಂಡು ಹುಚ್ಚನಂತೆ ಕುಣಿಯಹತ್ತಿದ. ಎಲ್ಲರಿಗೂ ಆನಂದವೇ ಆನಂದವಾಯಿತು. ಅಂದು ಎಲ್ಲೆಲ್ಲಿ ಕೇಳಿದರೂ ಯಾರೊಬ್ಬರ ಬಾಯಲ್ಲಿಯೂ ಭರತನ ಮಾತೇ ಮಾತು. ಆದೊಂದು ದಿನ ಎಲ್ಲರೂ ರಾಮನ ಆತಿಥ್ಯದಲ್ಲಿಯೇ ಉಳಿದರು. ಚಿತ್ರಕೂಟದ

ಸೌಂದರ್ಯ ಅವರಿಗೂ ಹೊಸದು. ಆ ಸೃಷ್ಟಿಯ ಸೊಬಗನ್ನು ಸವಿಯುವುದರಲ್ಲಿಯೇ ಅಂದಿನ ದಿನರಾತ್ರಿಗಳು ಕಳೆದುವು.

ಬೆಳಗಾಗುತ್ತಲೇ ಭರತ ಪಾದುಕೆಗಳನ್ನು ತಲೆಯಮೇಲಿಟ್ಟು ಕೊಂಡು ಅಣ್ಣನ ಅಪ್ಪಣೆಯನ್ನು ಪಡೆದು ಅಯೋಧ್ಯೆಗೆ ಮರಳಿದ;

ಆಗ–" ಅಣ್ಣಾ, ಈ ಪಾದುಕೆಗಳನ್ನೇ ಪೂಜಿಸುತ್ತ ೧೪ ವರುಷ ರಾಜ್ಯಭಾರ ನಡೆಸುವೆ. ಆ ಮೇಲೆ ಕ್ಷಣಕಾಲ ಕೂಡಾ ತಡೆಯದೆ ಅಯೋಧ್ಯೆಗೆ ಬರಬೇಕು. ಇಲ್ಲವಾದರೆ ನಾನು ಅಗ್ನಿಪ್ರವೇಶ ಮಾಡುವೆ. ಇದೇ ನನ್ನನಿನ್ನ ಕೊನೆಯ ದರ್ಶನವಾದೀತು'' ಎಂದು ಖಂಡಿತವಾಗಿ ಹೇಳಿದ. ತಪ್ಪದೇ ಬರುವುದಾಗಿ ರಾಮಚಂದ್ರ ಹೇಳಿದ. ಪರಿವಾರದ ಪಯಣ ಬೆಳೆಯಿತು.

---

## ೯. ಮಧುರ ಮಿಲನ

ಭರತ ಸಾವಕಾಶವಾಗಿ ಅಯೋಧ್ಯೆಯನ್ನು ಸಮೀಪಿಸುತ್ತಿದ್ದ. ಈಗ ಅವನ ಮನಸ್ಸಿನಲ್ಲಿ ಯಾವ ಕುತೂಹಲವೂ ಇರಲಿಲ್ಲ. ಶ್ರೀ ರಾಮನನ್ನು ಕರೆತಂದೇ ತೀರುವೆನೆಂಬ ಅವನ ಆಶೆಯೂ ನಿರಾಶೆ ಯಾಗಿತ್ತು. ಆದರೂ ಆತನ ಪವಿತ್ರ ಪಾದುಕೆಗಳು ಸಿಕ್ಕವಲ್ಲ ಎಂಬುದೊಂದೇ ಆತನಿಗೆ ಸಂತೋಷ. ಇದೇ ಹೊಯ್ದಾಟ ದಲ್ಲಿಯೇ ಅವರು ಅಯೋಧ್ಯೆಯನ್ನು ಮುಟ್ಟಿದರು.

ಭರತ ಬಂದ ಸುದ್ದಿಯನ್ನು ಕೇಳುತ್ತಲೇ ನಾಗರಿಕರೆಲ್ಲ ತಂಡ ತಂಡವಾಗಿ ಆತನ ಸ್ವಾಗತದ ಸಿದ್ಧತೆಯನ್ನು ನಡೆಸಿದರು. ಆದರೆ ಆತನಿಗೆ ಆ ಹೆಮ್ಮೆಯಾವುದೂ ಬೇಕಾಗಿರಲಿಲ್ಲ. ಆತನು ಮಂತ್ರಿ ಗಳಿಗೆ ತಿಳಿಸಿ ಊರ ಹೊರವಲಯಕ್ಕೇ ರಾಜಮರ್ಯಾದೆಯ ಛತ್ರ ಚಾಮರಗಳನ್ನು ಮಂಗಲವಾದ್ಯಗಳನ್ನು ತರಿಸಿಕೊಂಡ; ರಾಮನ ಪಾದುಕೆಗಳನ್ನು ತನ್ನ ತಲೆಯ ಮೇಲಿಟ್ಟುಕೊಂಡು ನಗರದಲ್ಲೆಲ್ಲ ಮೆರೆಸುತ್ತ ಹೊರಟ.

ಬೀದಿ ಬೀದಿಯಲ್ಲಿ ಸುವಾಸಿನಿಯರು ಆ ಪಾದುಕೆಗಳಿಗೆ ಮಂಗಲಾರತಿ ಮಾಡಿದರು. ಎಲ್ಲರೂ ಭರತ ಮಹಾನುಭಾವನನ್ನು ಕೊಂಡಾಡಹತ್ತಿದರು. ಮೆರವಣಿಗೆ ಮುಗಿಯಿತು. ಶ್ರೀರಾಮನ ಪಾದುಕೆಗಳನ್ನು ಅಯೋಧ್ಯೆಯ ಸುವರ್ಣದ ಸಿಂಹಾಸನದ ಮೇಲಿಟ್ಟರು; ಅದರ ಮೇಲೆ ರಾಜ ಮರ್ಯಾದೆಯ ಸಕಲ ಒಡವೆಗಳನ್ನು ಮೆರೆಸಿದರು.

ಭರತ ಸಿಂಹಾಸನದ ಕೆಳಗೇ ತನಗೊಂದು ಆಸನವನ್ನು ಮಾಡಿಸಿಕೊಂಡಿದ್ದ. ದರಬಾರಕ್ಕೆ ಹೋದಾಗ ಅಲ್ಲಿ ಕುಳ್ಳಿರುತ್ತಿದ್ದ; ಎಲ್ಲ ಋಷಿ ಮುನಿಗಳ ಮಂತ್ರಿಗಳ ನಾಗರಿಕರ ಆಲೋಚನೆಯಂತೆ ರಾಜ್ಯಭಾರವನ್ನು ಸಾಗಿಸುತ್ತಿದ್ದ. ಮಾತ್ರ ಆತನು ತನ್ನಷ್ಟಕ್ಕೆ ಶುದ್ಧ ಸಂನ್ಯಾಸಿಯ ವೇಷದಲ್ಲಿಯೇ ಇರುತ್ತಿದ್ದ. ವನವಾಸದಲ್ಲಿದ್ದ. ರಾಮಚಂದ್ರನ ಊಟ–ಉಡಿಗೆ–ಹಾಸಿಗೆ-ಹುಪ್ಪಡಿಗಳಂತೆಯೇ ತಾನೂ ಇಲ್ಲಿ ಮಾಡಿಕೊಂಡಿದ್ದ ! ರಾಜ್ಯಲಕ್ಷ್ಮಿ ಕೈಯಲ್ಲಿರುವಾಗ ಇಂತಹ ವೀರವೈರಾಗ್ಯವನ್ನು ಪಾಲಿಸಬೇಕಾದರೆ ಮನಸ್ಸು ಎಷ್ಟು ಬಲಿಷ್ಠವಾಗಿರಬೇಕು ?

ಅಯೋಧ್ಯೆ ಇತ್ತೀಚೆಗೆ ಭರತನಿಗೆ ಬೇಸರವೆನಿಸಹತ್ತಿತು. ಭರತನೂ ರಾಮಚಂದ್ರನೂ ಅಲ್ಲಿ ಕೂಡಿಯೇ ಆಡಿದವರು, ಕೂಡಿಯೇ ಬೆಳೆದವರು. ಆ ಒಂದೊಂದು ಸ್ಥಳವನ್ನು, ಆ ಒಂದೊಂದು ವಸ್ತುವನ್ನು ನೋಡಿದಾಗಲೆಲ್ಲ ಭರತನಿಗೆ ಶ್ರೀರಾಮನ ನೆನಪು ಬರುತ್ತಿತ್ತು; ಆತನು ಈ ರಾಜ್ಯೈಶ್ವರ್ಯವನ್ನು ಬಿಟ್ಟು ಕಾಡು ಸೇರಿದನಲ್ಲ ಎಂದು ಆತನಿಗೆ ಕೆಡುಕೆನಿಸುತ್ತಿತ್ತು. ಆದುದರಿಂದ ಆತನು ಅಯೋಧ್ಯೆಯನ್ನೇ ಬಿಡಬೇಕೆಂದು ಆಲೋಚಿಸಿದ.

ಒಮ್ಮೆ ಅವನು ಈ ವಿಚಾರವನ್ನು ವಶಿಷ್ಠ–ಸುಮಂತರಿಗೆ ತಿಳಿಸಿದ; ಮತ್ತು ತಾನು ನಂದಿಗ್ರಾಮದಲ್ಲಿರುವುದಾಗಿ ಹೇಳಿದ;

ಅಲ್ಲದೆ ಅದನ್ನೇ ತನ್ನ ರಾಜಕಾರಣದ ಕೇಂದ್ರವನ್ನು ಮಾಡಿಕೊಳ್ಳು ವುದಾಗಿ ತಿಳಿಸಿದ. ದರಬಾರವೆಲ್ಲ ಒಪ್ಪಿತು. ಏಕೆಂದರೆ ಭರತನ ಸ್ವಭಾವ ಅವರೆಲ್ಲರಿಗೆ ತಿಳಿದಿತ್ತು.

ಆ ಮೇಲೆ ಭರತ ರಾಜಮಾತೆಯರ ಒಪ್ಪಿಗೆಯನ್ನು ತೆಗೆದು ಕೊಳ್ಳಬೇಕಾಯಿತು. ಅವರೆಲ್ಲ ಮೊದಮೊದಲು ಬೇಡವೆಂದು ಹೇಳಿದರು; ಆ ಮೇಲೆ ತಾವೂ ಆತನ ಕೂಡ ಹೊರಡುವುದಾಗಿ ತಿಳಿಸಿದರು. ಆದರೆ ಭರತ ತನಗೆ ಏಕಾಂತವಾಸಬೇಕೆಂದು ಹಠ ವನ್ನು ಹಿಡಿದ. ಅದರಿಂದ ಅವರೂ ಸುಮ್ಮನಾದರು; ತಮ್ಮ ಒಪ್ಪಿಗೆಯನ್ನು ಕೊಟ್ಟರು.

ಭರತ ನಂದಿಗ್ರಾಮಕ್ಕೇ ಆ ಪಾದುಕೆಗಳನ್ನು ಒಯ್ದ; ಅಲ್ಲಿಯೂ ಅಯೋಧ್ಯೆಯ ಅರಸರ ಸಿಂಹಾಸನವಿತ್ತು. ಆದರ ಮೇಲೆ ಪಾದುಕೆಗಳನ್ನು ಇಟ್ಟ; ಅವುಗಳ ಅನುಗ್ರಹದಿಂದ ತಾನು ರಾಜ್ಯಭಾರವನ್ನು ನಡೆಸಿದ. ಪ್ರತಿದಿನವೂ ಭರತ ಪಾದುಕೆಗಳನ್ನು ತಾನೇ ಕೈಮುಟ್ಟಿ ಪೂಜಿಸುತ್ತಿದ್ದ; ಅರಸೊತ್ತಿಗೆಗೆ ಬಂದ ಎಲ್ಲ ಕಾಣಿಕೆಗಳನ್ನು ಅವುಗಳಿಗೇ ಸಮರ್ಪಿಸುತ್ತಿದ್ದ. ಹೀಗೆಯೇ ದಿನ ಗಳ ಮೇಲೆ ದಿನಗಳು ಉರುಳಹತ್ತಿದುವು.

ಹದಿನಾಲ್ಕು ವರುಷಗಳು ಮುಗಿಯುತ್ತ ಬಂದುವು. ಇನ್ನು ರಾಮಚಂದ್ರ ಅಯೋಧ್ಯೆಗೆ ಬರಬೇಕು. ಅದರಿಂದ, ಅದಕ್ಕಿಂತ ಏಳೆಂಟು ದಿವಸ ಮೊದಲೇ ಭರತ ಅಯೋಧ್ಯೆಗೆ ಬಂದ; ಅಣ್ಣನ ಸ್ವಾಗತದ ಸಿದ್ಧತೆಯನ್ನು ನಡಿಸಿದ. ನಾಗರಿಕರಿಗೂ ಆ ಬಗೆಗೆ ತುಂಬಾ ಉತ್ಸಾಹವಿತ್ತು.

ಹದಿನಾಲ್ಕು ವರುಷ ಮುಗಿದುವು. ಮುಂದೇನು ? ಭರತ ಅಣ್ಣನ ದಾರಿಯನ್ನು ನೋಡಿ ನೋಡಿ ಬೇಸತ್ತ. ನಿರಾಶೆಯಾಯಿತು ತಡವಿಲ್ಲದೆ ಗುರುಗಳನ್ನು ಕರೆಸಿದ. ತನ್ನ ಅಗ್ನಿ ಪ್ರವೇಶದ ಸಿದ್ಧತೆ

ಯನ್ನು ನಡೆಸಿದ. ಅಗ್ನಿ ಕುಂಡದಲ್ಲಿ ಅಗ್ನಿನಾರಾಯಣ ಸೂ ಸೂ ಸಪ್ಪಳ ಮಾಡುತ್ತ ಸುಳಿದಾಡಹತ್ತಿದ; ಕೊನೆಗೊಮ್ಮೆ ಭುಗಿಲ್ಲನೆ ಮೇಲೆದ್ದ; ಎಲ್ಲ ದಿಕ್ಕುಗಳಲ್ಲಿಯೂ ತನ್ನ ಉರಿ ನಾಲಿಗೆಯನ್ನು ಚಾಚಹತ್ತಿದ.

ಭರತ ಅಗ್ನಿಪ್ರವೇಶಕ್ಕೆ ಸಿದ್ಧನಾಗಿ ಬಂದ. ಋಷಿಮುನಿಗಳು ಮಂತ್ರಗಳನ್ನು ಹೇಳಹತ್ತಿದರು. ರಾಜಪರಿವಾರವೂ ನಾಗರಿಕರೂ ಕಣ್ಣೀರಿನ ಕಾಲುವೆಗಳನ್ನು ಹರಿಸಹತ್ತಿದರು.

ಭರತ ಮೂರು ಪ್ರದಕ್ಷಿಣೆಗಳನ್ನು ಮುಗಿಸಿದ. ಇನ್ನು ಅಗ್ನಿಯಲ್ಲಿ ಹಾರಿಕೊಳ್ಳಬೇಕು– ಅಷ್ಟರಲ್ಲಿ ಭೌಂಽಽವ್ ಭೌಂಽಽವ್ ಎಂದು ಸಪ್ಪಳು ಮುಗಿಲಿನಲ್ಲಿ ಪ್ರತಿಧ್ವನಿ ಗೊಡಹತ್ತಿತು. ಎಲ್ಲರೂ ಅತ್ತ ನೋಡಹತ್ತಿದರು. ವಿಮಾನವೊಂದು ವೇಗವಾಗಿ ಅತ್ತಲೇ ಬರುತ್ತಿತ್ತು. ರಾಮಚಂದ್ರನೇ ಬಂದನೆಂದು ಎಲ್ಲರಿಗೂ ಎನಿಸಿತು. ಭರತನೂ ಅತ್ತಲೇ ನೋಡುತ್ತಿದ್ದ. ಅಷ್ಟರಲ್ಲಿ ವಿಮಾನ ಬಂದಿಳಿಯಿತು. ರಾಮ ಥಟ್ಟನೆ ಕೆಳಗೆ ಹಾರಿದ; ಓಡಿಬಂದವನೇ ಭರತನನ್ನು ಅಪ್ಪಿಕೊಂಡ !

“ ಅಣ್ಣಾ ಅಣ್ಣಾ ರಾಮಚಂದ್ರಾ, ಇಂದು ನನ್ನ ಜನ್ಮ ಸಫಲವಾಯಿತು ” ಎಂದು ಭರತ ರಾಮನ ಪಾದಗಳಿಗೆರಗಿದ. ನೆರೆದವರೆಲ್ಲ ಆ ಬಂಧುಗಳ ಹೆಸರಿನಿಂದ ದಿಕ್ತಟಗಳು ಬಿರಿಯುವಂತೆ ಜಯಘೋಷ ಮಾಡಿದರು. ಬಂಧು ಬಾಂಧವರ ಮಧುರ ಮಿಲನವಾಯಿತು.

ಭರತನ ಈ ಬಂಧುಪ್ರೇಮದ ಮಾದರಿ ಇಂದಿಗೂ ಎಂದೆಂದಿಗೂ ಆದರ್ಶವಾಗಿಲ್ಲವೇ ?

**ಮುಗಿದುದು**